KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಏಪ್ರಿಲ್ ೩, ೨೦೦೮ (ಚೈತ್ರ ೧೪, ಶಕ ವರ್ಷ ೧೯೩೦) | ಸಂಚಿಕೆ ೧೪ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಚಿತ್ರದುರ್ಗ

**ನಂ. ಡಿಆರ್‌ಡಿ: ಡಿಡಿಎಸ್: ಅಧಿಭಾರ ಅರ್ಜಿ:01: 07–08, ದಿನಾಂಕ:23ನೇ ಜನವರಿ, 2008**

**ವಿಷಯ:** ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103(2)ರನ್ವಯ ತೀರ್ಪು ಪೂರ್ವ ಜಪ್ತಿಯ ಆದೇಶ ನೀಡುವ ಬಗ್ಗೆ.

**ಉಲ್ಲೇಖ:** ವ್ಯವಸ್ಥಾಪಕರು ಚಿತ್ರದುರ್ಗ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಚಿತ್ರದುರ್ಗ ಇವರು ಸಲ್ಲಿಸಿರುವ ಅರ್ಜಿ ಕ್ರಮಾಂಕ: ಪಿಸಿಎಆರ್‌ಡಿ ಬ್ಯಾಂಕ್: ಸಿಟಿಎ:268: 07–08, ದಿನಾಂಕ:26.11.2007.

**ಪ್ರಸ್ತಾವನೆ:**

ಚಿತ್ರದುರ್ಗ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಚಿತ್ರದುರ್ಗ ಇದರ 2003–04ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯನ್ನು ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ವರದಿಯನ್ವಯ ಬ್ಯಾಂಕಿನಲ್ಲಿ ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಸಾಯಿರಾಂ ಸಿಂಗ್ ಇವರು ರೂ.10,15,449–00 (ಹತ್ತು ಲಕ್ಷದ ಹದಿನೈದು ಸಾವಿರದ ನಾಲ್ಕು ನೂರು ನಲವತ್ತೊಂಬತ್ತು) ಗಳ ಹಣದುರುಪಯೋಗ ಪಡಿಸಿರುವುದು ಬೆಳಕಿಗೆ ಬಂದಿದ್ದು, ಈ ದುರುಪಯೋಗದ ಹಣಕ್ಕೆ ಶ್ರೀ ಸಾಯಿರಾಂ ಸಿಂಗ್ ಇವರನ್ನು ಜವಾಬ್ದಾರರನ್ನಾಗಿ ಗುರುತಿಸಿರುವುದರಿಂದ ಈ ದುರುಪಯೋಗದ ಹಣವನ್ನು ಸದರಿಯವರಿಂದ ವಸೂಲಿ ಮಾಡಿಕೊಳ್ಳಲು ಆದೇಶ ನೀಡಬೇಕೆಂದು ಕೋರಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 69ರಡಿಯಲ್ಲಿ ಅಧಿಭಾರ ಅರ್ಜಿಯನ್ನು ಉಲ್ಲೇಖಿತ ಪತ್ರದ ಮೂಲಕ ಸಲ್ಲಿಸಿರುತ್ತಾರೆ.

ಸದರಿ ಅಧಿಭಾರ ಅರ್ಜಿಯು ಇತ್ಯಾರ್ಥವಾಗುವ ಪೂರ್ವದಲ್ಲಿ ಕಾಯ್ದೆಯ ಕಲಂ 103 ರಡಿಯಲ್ಲಿ ಜಪ್ತಿ ಆದೇಶ ನೀಡಬೇಕೆಂದು ಅರ್ಜಿಯನ್ನು ಸಹ ಸಲ್ಲಿಸಿರುತ್ತಾರೆ.

ಅರ್ಜಿದಾರರು ಸಲ್ಲಿಸಿರುವ ಕಲಂ 103 ರಡಿಯ ಅರ್ಜಿಯ ಮೂಲಕ ಆರೋಪಿತ ನೌಕರರ ಕುಟುಂಬದವರ (ಪತ್ನಿಯ) ಹೆಸರಿನಲ್ಲಿ ವಾಸದ ಮನೆಯುಳ್ಳ ಸ್ಥಿರಾಸ್ತಿಯನ್ನು ಹೊಂದಿದ್ದು, ಅಧಿಭಾರ ಅರ್ಜಿ ಪ್ರಕರಣ ಇತ್ಯರ್ಥವಾಗಿ ಆದೇಶ ನೀಡುವ ಪೂರ್ವದಲ್ಲಿ ಮಾರಾಟ/ ಪರಭಾರೆ ಮಾಡುವ ಸಾಧ್ಯತೆಗಳಿರುವುದರಿಂದ ಸದರಿ ಸ್ಥಿರಾಸ್ತಿಯನ್ನು ಪರಭಾರೆ ಮಾಡದಂತೆ ಜಪ್ತಿ ಮಾಡಿ ಆದೇಶ ಹೊರಡಿಸಬೇಕೆಂದು ಸದರಿ ಆಸ್ತಿಯ ವಿವರಗಳನ್ನು ಸಲ್ಲಿಸಿ ಕೋರಿರುತ್ತಾರೆ.

ಅರ್ಜಿದಾರರ ಕೋರಿಕೆಯನ್ನು ಪರಿಗಣಿಸಿ ಶ್ರೀ ಸಾಯಿರಾಸಿಂಗ್ ಇವರು ಅಧಿಭಾರ ಪ್ರಕರಣದಲ್ಲಿ ಹೊಂದಿರುವ ರೂ.10,15,449–00 ಗಳಿಗೆ ಸಾಕಷ್ಟು ಭದ್ರತೆ ಕೊಡಲು ಹಾಗೂ ಭದ್ರತೆ ಕೊಡದೇ ಇದ್ದ ಪಕ್ಷದಲ್ಲಿ ಕೆಳಕಾಣಿಸಿದ ಷೆಡ್ಯೂಲ್‌ನಲ್ಲಿ ವಿವರಿಸಿರುವ ವಿಶಿಷ್ಟ ಆಸ್ತಿಯನ್ನು ಜಪ್ತಿ ಮಾಡಲು ಆದೇಶ ನೀಡುವ ಹಿನ್ನೆಲೆಯಲ್ಲಿ ಅಧಿಭಾರ ಪ್ರಕರಣದಲ್ಲಿನ ಎದುರು ಅರ್ಜಿದಾರರಿಗೆ ಕಲಂ 103(2)ರ ಪ್ರಕಾರ ಈ ಕೆಳಕಂಡಂತೆ ನೋಟೀಸು ನೀಡಲಾಗಿದೆ.

**"ನೋಟೀಸು"**

ಕರ್ನಾಟಕ ಸಹಕಾರ 'ಸಂಘಗಳ ಅಧಿನಿಯಮ 1959ರ ಕಲಂ 103(2) ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: 69: ಸಿಎಲ್ಎಂ: 2001 ದಿನಾಂಕ:22.11.2001 ರನ್ವಯ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ಶಿವಪ್ರಕಾಶ್, ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಚಿತ್ರದುರ್ಗ ಇದರ ವ್ಯವಸ್ಥಾಪಕರು ನಿಮ್ಮ ವಿರುದ್ಧ ದಾಖಲಿಸಿರುವ ಕಾಯ್ದೆ ಕಲಂ 69 ರಡಿಯಲ್ಲಿನ ಅಧಿಭಾರ ಪ್ರಕರಣದಲ್ಲಿ ಒಳಗೊಂಡಿರುವ ಮೊತ್ತ ರೂ.10,15,449–00 (ಹತ್ತು ಲಕ್ಷದ ಹದಿನೈದು ಸಾವಿರದ ನಾಲ್ಕು ನೂರ ನಲವತ್ತೊಂಬತ್ತು)ಗಳಿಗೆ ಸಮನಾದ ಮೊಬಲಗು ರೂ.10,15,449–00 ಗಳ ನಗದು ಹಣವನ್ನು ಅಥವಾ ಅಷ್ಟು ಬೆಲೆಯ ಜಾಮೀನು ರೂಪದ ಭದ್ರತೆಯನ್ನು ಈ ನೋಟೀಸು ತಲುಪಿದ 15 ದಿನಗಳ ಒಳಗಾಗಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ಡಿ.ಸಿ.ಸಿ. ಬ್ಯಾಂಕ್ ನಿ.) ನಿ ಇದರ ಚಿತ್ರದುರ್ಗ ಟೌನ್ ಶಾಖೆಯಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು ಚಿತ್ರದುರ್ಗ ಇವರ ಹೆಸರಿನಲ್ಲಿ ವಿಶೇಷ ಠೇವಣಿ ರೂಪದಲ್ಲಿ ಸಂದಾಯಿಸಿ ಠೇವಣಿ ಮಾಡಿದ ರಸೀದಿ ಅಥವಾ ಚಲನ್‌ಗಳನ್ನು ಈ ಕಛೇರಿಗೆ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಈ ಜಪ್ತಿ ಆದೇಶವನ್ನು ಸ್ಥಿರೀಕರಿಸಲ್ಪಡಲಾಗುವುದೆಂದು ತಿಳಿಯತಕ್ಕದ್ದು.

**"ಸ್ಥಿರಾಸ್ತಿಯ ಷೆಡ್ಯೂಲ್"**

ಮೈಸೂರು ಸಿಟಿ, ವಿಜಯನಗರ 1ನೇ ಹಂತ, 4ನೇ ಮುಖ್ಯರಸ್ತೆ 4ನೇ ಕ್ರಾಸ್, ನಿವೇಶನದ ಸಂಖ್ಯೆ: 328, ಅಳತೆ 12 x 18 ಮೀಟರ್‌ಗಳು ಇದಕ್ಕೆ ಚಕ್ಕುಬಂದಿ.

ಪೂರ್ವ: ನಿವೇಶನದ ಸಂಖ್ಯೆ: 329, ಪಶ್ಚಿಮಕ್ಕೆ: ನಿವೇಶನದ ಸಂಖ್ಯೆ:327, ಉತ್ತರಕ್ಕೆ: ಪ್ರಾಧಿಕಾರದ ಜಾಗ ಮತ್ತು ನಿವೇಶನದ ಸಂಖ್ಯೆ: 317 ಮತ್ತು 318, ದಕ್ಷಿಣಕ್ಕೆ: ರಸ್ತೆ.

ಮೇಲ್ಕಂಡ ಸ್ಥಿರಾಸ್ತಿಯನ್ನು ಯಾರಾದರೂ ಕ್ರಯಕ್ಕೆ ಅಥವಾ ಇನ್ನೆತರೆ ಯಾವುದೇ ರೂಪದಲ್ಲಿ ಪಡೆದು ವರ್ಗಾವಣೆ ಮಾಡಿಕೊಂಡಲ್ಲಿ ಈ ಪ್ರಕರಣದಲ್ಲಿ ತೀರ್ಪು/ ಆದೇಶ ಪೂರ್ವದಲ್ಲಿ ನೀಡಲಾದ ಜಪ್ತಿ ಆದೇಶಕ್ಕೆ ಒಳಪಟ್ಟಿರತಕ್ಕದ್ದೆಂದು ಭಾವಿಸತಕ್ಕದ್ದು.

ಈ ನೋಟೀಸನ್ನು ನನ್ನ ಸ್ವಹಸ್ತ ಸಹಿ ಹಾಗೂ ಕಛೇರಿಯ ಮೊಹರಿನೊಂದಿಗೆ ದಿನಾಂಕ:23.01.2008 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.120

**KARNATAKA POWER TRANSMISSION CORPORATION LIMITED**

**OFFICE OF THE EXECUTIVE ENGINEER (E), MAJOR WORKS DIVISION, KPTCL, DAVANAGERE**

**NOTIFICATION**

**No. EE/MWD/DVG/ AEE(O)/ MWD/F-TK-39/ 3832, Dated:25th February, 2008**

Karnataka Transmission Corporation Limited has formulated a scheme under section 67 of the Electricity supply Act 2003 and the same is herewith published in pursuance of section 67(2) (C) of the said act for information of the public. Particulars of the scheme are as follows.

**Name of the Work:** Construction of 66 KV SC Line on D/C towers from existing Hosdurga-Ramgiri 66 KV S/C line to Proposed 66/11 KV Sub Station at Bagur in Hosdurga Taluk, Chitradurga District.

**Salient Features:** The 11 KV feeders for Bagur area are over loaded and have poor voltage regulation in and around the area. Hence in order to reduce the load and improve the voltage and to minimize the interruptions, it is proposed to establish 2x8 MVA, 66/11 KV S/S at Bagur.

**Area passing through:** Bagur Village limits.

**Approximate Cost:** Rs.6.00 Lakhs.

KPTCL shall have and exercise all powers which the Telegraphic Authorities passes under part-III of the Indian Telegraphs Act 1885 (13 of 1885) for carrying of the above said scheme. Any objections or discrepancies to the schemes if any, should be sent to the office of Executive Engineer (Ele), Major Works Division, KPTCL, 2nd Floor, RH Building, PB Road, Davanagere within 30 days from the date of publication of this notification for consideration by the Corporation.

Executive Engineer (Ele),
Major Works Division, KPTCL, Davanagere.

PD-39

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–2, ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು–2**

**ಸಂಖ್ಯೆ: ಡಬ್ಲ್ಯೂಸಿಎ: ಎಸ್‌ಆರ್–2/08 ಎಫ್, ದಿನಾಂಕ:22ನೇ ಜನವರಿ, 2008**

**ಅರ್ಜಿದಾರರು:**

1) ಸಾರಮ್ಮ, ಮೃತ ಪಿ. ಆಲಿಯಲ್ಪುರವರ ಮಡದಿ.
2) ಮಹಮ್ಮದ್ ಇಸ್ಮಾಯಿಲ್,
ಮೃತ ಪಿ. ಆಲಿಯಲ್ಪುರವರ ಮಗ
3) ಶೇಖ್ ಅಬ್ದುಲ್ಲ, ಮೃತ ಪಿ. ಆಲಿಯಲ್ಪುರವರ ಮಗ,
ಜನತಾ ಕಾಲೋನಿ ಹೌಸ್, ಪೋಸ್ಟ್:ಪುದು,
ತುಂಬೆ ವಿಲೇಜ್, ಬಂಟ್ವಾಳ ತಾಲ್ಲೂಕು.

**ಪ್ರತಿವಾದಿಗಳು:**

1) ದಿ ಚೇರ್‌ಮನ್
ನ್ಯೂ ಮಂಗಳೂರು ಪೋರ್ಟ್ ಟ್ರಸ್ಟ್,
ಪಣಂಬೂರು, ಮಂಗಳೂರು–10.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಸಾರಮ್ಮ ಇವರು ಗಂಡನಾದ: ಶ್ರೀ ಆಲಿಯಲ್ಪು ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:22.07.2007 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ ಉಪವಿಭಾಗ–2, ಮಂಗಳೂರು.

ಪಿ.ಆರ್.123

**ವಸತಿ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ವಇ/279/ ಹೆಚ್‌ಎಎಂ/ 2007, ಬೆಂಗಳೂರು, ದಿನಾಂಕ:11ನೇ ಜನವರಿ, 2008**

ದಿನಾಂಕ:20.11.2007ರಂದು ಕರ್ನಾಟಕ ವಿಧಾನ ಸಭೆಯು ವಿಸರ್ಜನೆಗೊಂಡಿರುವುದರಿಂದ ರಾಜ್ಯದ ಗ್ರಾಮೀಣ ಆಶ್ರಯ ಸಮಿತಿಗಳಿಗೆ ಈಗಿರುವ ಅಧ್ಯಕ್ಷರ ಬದಲಿಗೆ ಆಯಾ ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಾಹಕಾಧಿಕಾರಿಗಳನ್ನು ಅಧ್ಯಕ್ಷರನ್ನಾಗಿ ಹಾಗೂ ನಗರ ಆಶ್ರಯ ಸಮಿತಿಗಳಿಗೆ (ಬೆಂಗಳೂರು ನಗರ ಆಶ್ರಯ ಸಮಿತಿಯನ್ನು ಹೊರತುಪಡಿಸಿ) ಸಂಬಂಧಪಟ್ಟಂತೆ ಆಯಾ ಜಿಲ್ಲಾಧಿಕಾರಿಗಳನ್ನು ಅಧ್ಯಕ್ಷರನ್ನಾಗಿ ನೇಮಕ ಮಾಡಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಆಯುಕ್ತರು, ಬೆಂಗಳೂರು ಬೃಹತ್ ಮಹಾನಗರ ಪಾಲಿಕೆರವರು ಬೆಂಗಳೂರು ಬೃಹತ್ ಮಹಾನಗರ ಪಾಲಿಕೆಗೆ ಒಳಪಡುವ ಪ್ರದೇಶಗಳ ನಗರ ಆಶ್ರಯ ಸಮಿತಿಗೆ ಅಧ್ಯಕ್ಷರಾಗಿಯೂ, ವಿಶೇಷ ಆಯುಕ್ತರು ಅಥವಾ ಬೆಂಗಳೂರು ನಗರ ಜಿಲ್ಲಾಧಿಕಾರಿಗಳನ್ನು ಸಮಾವೇಶಕರನ್ನಾಗಿ ನೇಮಿಸಲಾಗಿದೆ. ಬೆಂಗಳೂರು ಬೃಹತ್ ಮಹಾನಗರ ಪಾಲಿಕೆಯ ವ್ಯಾಪ್ತಿಯಿಂದ ಹೊರಗುಳಿದ ಬೆಂಗಳೂರು ನಗರ ಜಿಲ್ಲೆಗೆ, ಜಿಲ್ಲಾಧಿಕಾರಿಗಳನ್ನು ಅಧ್ಯಕ್ಷರನ್ನಾಗಿ ನೇಮಕ ಮಾಡಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಭಾರತ ಸರ್ಕಾರದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಂಗಮ್ಮ**
ಪೀಠಾಧಿಕಾರಿ–2, ವಸತಿ ಇಲಾಖೆ.

ಪಿ.ಆರ್.124

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು–52**

**ಕ್ರಮಾಂಕ: ಯುಬಿಸಿ–1/171/ ಸಮಾಪನೆ/ 2007–08, ದಿನಾಂಕ:28ನೇ ಜನವರಿ, 2008**

**ವಿಷಯ:** ದಿ ಕಿತ್ತೂರು ರಾಣಿ ಚೆನ್ನಮ್ಮ ಮಹಿಳಾ ಪಟ್ಟಣ ಸಹಕಾರ ಬ್ಯಾಂಕ್ ನಿ., ಹುಬ್ಬಳ್ಳಿ ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ಎ ರೀತ್ಯಾ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಭಾರತೀಯ ರಿಸರ್ವ್ ಬ್ಯಾಂಕ್, ಮುಂಬೈ ಇದರ ಉಪ ಪ್ರಧಾನ ವ್ಯವಸ್ಥಾಪಕರವರ ಪತ್ರ ಸಂಖ್ಯೆ: ಯುಬಿಡಿ ಸಿಒ/ ಬಿಎಸ್‌ಡಿ/ ಎನ್‌ಎಸ್‌ಬಿ 1/ 570/ 12,23,208/ 2007–08, ದಿನಾಂಕ:17.07.2007.

2) ಭಾರತೀಯ ರಿಸರ್ವ್ ಬ್ಯಾಂಕ್, ಮುಂಬೈ ಇದರ ಕಾರ್ಯನಿರ್ವಾಹಕ ನಿರ್ದೇಶಕರ ಪತ್ರ ಸಂಖ್ಯೆ: ಯುಬಿಡಿ ಸಂಖ್ಯೆ: ಸಿಒ/ ಬಿಎಸ್‌ಡಿ/ ಎನ್‌ಎಸ್‌ಬಿ 1/ ಆರ್‌ಎಲ್‌ಸಿ/ 115/ 12.23.208/ 2007–08 ದಿನಾಂಕ:16.07.2007.

3) ಭಾರತೀಯ ರಿಸರ್ವ್ ಬ್ಯಾಂಕ್, ಮುಂಬೈ ಇದರ ಕಾರ್ಯನಿರ್ವಾಹಕ ನಿರ್ದೇಶಕರ ಪತ್ರಸಂಖ್ಯೆ: ಯುಬಿಡಿ ಸಂಖ್ಯೆ: ಸಿಒ/ ಬಿಎಸ್‌ಡಿ/ ಎನ್‌ಎಸ್‌ಬಿ 1/ ಎಲ್‌ಸಿ/ 114/ 12.23.208/ 2007–08 ದಿನಾಂಕ:16.07.2007.

**ಪ್ರಸ್ತಾವನೆ:**

ದಿ ಕಿತ್ತೂರು ರಾಣಿ ಚನ್ನಮ್ಮ ಮಹಿಳಾ ಪಟ್ಟಣ ಸಹಕಾರ ಬ್ಯಾಂಕ್ ನಿ, ಹುಬ್ಬಳ್ಳಿ ಇದು ಬ್ಯಾಂಕಿಂಗ್ ರೆಗ್ಯೂಲೇಷನ್ ಕಾಯ್ದೆ 1949ರ ಕಲಂ 11(1) 18, 22(3)ಎ, 22(3)ಬಿ, ಮತ್ತು 24ನ್ನು ಪಾಲನೆ ಮಾಡುವಲ್ಲಿ ವಿಫಲವಾಗಿದೆ ಹಾಗೂ ಋಣಗಳನ್ನು (Debts) ತೀರಿಸಲು ಅಸಮರ್ಥವಾಗಿದೆ. ಈ ಹಿನ್ನೆಲೆಯಲ್ಲಿ ಈ ಬ್ಯಾಂಕನ್ನು ಸಮಾಪನೆಗೊಳಿಸುವುದು ಅಗತ್ಯವೆಂದು ಭಾರತೀಯ ರಿಸರ್ವ್ ಬ್ಯಾಂಕ್ ಉಲ್ಲೇಖ (1)ರ ಪತ್ರದಲ್ಲಿ ತಿಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72ಎ ರಡಿಯಲ್ಲಿ ಸಮಾಪನೆಗೊಳಿಸಲು ಕೋರಿದೆ.

ಈ ಹಿನ್ನೆಲೆಯಲ್ಲಿ ಭಾರತೀಯ ರಿಸರ್ವ್ ಬ್ಯಾಂಕಿನ ಉಲ್ಲೇಖ (1)ರ ಪತ್ರದ ನಿರ್ದೇಶನದನ್ವಯ ಬ್ಯಾಂಕನ್ನು ಸಮಾಪನೆಗೊಳಿಸುವುದು ಸಮಂಜಸವೆಂಬುದನ್ನು ಮನಗಂಡು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ದಿ ಕಿತ್ತೂರು ರಾಣಿ ಚನ್ನಮ್ಮ ಮಹಿಳಾ ಪಟ್ಟಣ ಸಹಕಾರ ಬ್ಯಾಂಕ್ ನಿ., ಹುಬ್ಬಳ್ಳಿ ಇದನ್ನು ಸಮಾಪನೆಗೊಳಿಸಿ ಸಮಾಪಕರನ್ನಾಗಿ ಸ.ಸಂ. ಸಹಾಯಕ ನಿಬಂಧಕರು, ಧಾರವಾಡ ಉಪವಿಭಾಗ, ಧಾರವಾಡ ಇವರನ್ನು ನೇಮಿಸಿರುತ್ತೇನೆ.

ಸಮಾಪಕರು ಕೂಡಲೇ ಪ್ರಭಾರ ವಹಿಸಿಕೊಂಡು ಈ ಕಛೇರಿಗೆ ವರದಿ ಮಾಡುವುದು.

ಸಮಾಪಕರು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, ನಿಯಮ, ಆರ್.ಬಿ.ಐ. ನಿರ್ದೇಶನಗಳು ಈ ಕಛೇರಿಯ ನಿರ್ದೇಶನ/ ಸುತ್ತೋಲೆಗಳನುಸಾರವಾಗಿ ಬ್ಯಾಂಕಿನ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗೆ ಕ್ರಮ ತೆಗೆದುಕೊಳ್ಳತಕ್ಕದ್ದು.

ಈ ಆದೇಶವನ್ನು ದಿನಾಂಕ:28.01.2008 ರಂದು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

ಪಿ.ಆರ್.125

## ಕೈಮಗ್ಗ ಮತ್ತು ಜವಳಿ ಇಲಾಖೆ
## ಜವಳಿ ಅಭಿವೃದ್ಧಿ ಆಯುಕ್ತರವರ ಕಛೇರಿ, ನೃಪತುಂಗ ರಸ್ತೆ, ಬೆಂಗಳೂರು–560 001
## ಪರಿಷ್ಕೃತ ಅಧಿಸೂಚನೆ
**ಸಂಖ್ಯೆ: ಕೈಜಇ/ಆ/ ಮಾಹಅ–2005/ 2005–06/ 29, ದಿನಾಂಕ:14ನೇ ಜನವರಿ, 2008**

**ವಿಷಯ:** ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಅಡಿಯಲ್ಲಿ ಮಾಹಿತಿಯನ್ನು ಒದಗಿಸುವ ಮತ್ತು ಮೇಲ್ಮನವಿ ಪ್ರಾಧಿಕಾರಿಗಳನ್ನಾಗಿ ನೇಮಿಸಿರುವುದನ್ನು ತಿದ್ದುಪಡಿ ಮಾಡುವ ಕುರಿತು.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ/ 57/ ಸಮನ್ವಯ/ 2005, ದಿನಾಂಕ:21.07.2005.

2) ಈ ಕಛೇರಿಯ ಪತ್ರ ಸಂಖ್ಯೆ:DHT/ADMN/ Sup-26/2005-06, ದಿನಾಂಕ:28.09.2005.

3) ಈ ಕಛೇರಿಯ ಸಮಸಂಖ್ಯೆಯ ಪತ್ರ ದಿನಾಂಕ:02.12.2006ರ ಪರಿಷ್ಕೃತ ಅಧಿಸೂಚನೆ.

4) ಸರ್ಕಾರದ ಆದೇಶ ಸಂಖ್ಯೆ:ವಾಕೈ/ 42/ ಜಕೈಯೋ/2007, ದಿನಾಂಕ:05.07.2007.

ಸರ್ಕಾರದ ಉಲ್ಲೇಖ (1)ರ ಅಧಿಸೂಚನೆ ಮೇರೆಗೆ ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2005ರ ಅಡಿಯಲ್ಲಿ ಸಾರ್ವಜನಿಕರು ಕೋರುವ ಮಾಹಿತಿಗಳನ್ನು ನೀಡುವ ಸಲುವಾಗಿ ಕೈಮಗ್ಗ ಮತ್ತು ಜವಳಿ ಇಲಾಖೆಯ ನಿರ್ದೇಶನಾಲಯಕ್ಕೆ ಸಂಬಂಧಿಸಿದಂತೆ ನಿರ್ದೇಶನಾಲಯದ ಮಟ್ಟದಲ್ಲಿ ಹಾಗೂ ಜಿಲ್ಲಾ ಮಟ್ಟಕ್ಕೆ ಸಂಬಂಧಪಟ್ಟಂತೆ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ, ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರ ಅಧಿಕಾರಿಗಳನ್ನು ನೇಮಿಸಿ ಅಧಿಸೂಚನೆ ಹೊರಡಿಸಲಾಗಿದೆ.

ಉಲ್ಲೇಖ (4)ರ ಸರ್ಕಾರಿ ಆದೇಶದಲ್ಲಿ ಕೈಮಗ್ಗ ಮತ್ತು ಜವಳಿ ಇಲಾಖೆಯನ್ನು ಪುನಃಸ್ಸಂಘಟಿಸಿ, ಇಲಾಖೆಗೆ ಹೊಸ 56 ವಿವಿಧ ವೃಂದದ ಹುದ್ದೆಗಳನ್ನು ಸೃಜಿಸಲು ಸರ್ಕಾರವು ಅನುಮೋದನೆ ನೀಡಿದೆ. ಜಿಲ್ಲೆಗಳಲ್ಲಿಯ ಕೈಮಗ್ಗ ಮತ್ತು ಜವಳಿ

ಕ್ಷೇತ್ರದ ಚಟುವಟಿಕೆಗಳನ್ವಯ, ಅಧಿಕಾರಿ/ ಸಿಬ್ಬಂದಿ ವರ್ಗದವರ ಹುದ್ದೆಗಳನ್ನು ಕೇಂದ್ರ ಕಛೇರಿ ಹಾಗೂ ಜಿಲ್ಲಾ ಮಟ್ಟದ ಕಛೇರಿಗಳಿಗೆ ಮರುವಿಂಗಡಿಸಿ, ಕೆಲವು ಜಿಲ್ಲೆಗಳಿಗೆ ಉಪನಿರ್ದೇಶಕರ ಹುದ್ದೆ ಹಾಗೂ ಕೆಲವು ಜಿಲ್ಲೆಗಳಲ್ಲಿ ಸಹಾಯಕ ನಿರ್ದೇಶಕರುಗಳ ಹುದ್ದೆಗಳನ್ನು ಸೃಜಿಸಲಾಗಿದೆ. ಇದರಿಂದಾಗಿ ಉಲ್ಲೇಖ (3)ರ ಅಧಿಸೂಚನೆಯಲ್ಲಿ ಕೆಲವು ಮಾರ್ಪಾಡು/ ತಿದ್ದುಪಡಿಗಳನ್ನು ಮಾಡುವ ಅಗತ್ಯತೆ ಕಂಡುಬಂದಿದೆ.

ಮೇಲೆ ವಿವರಿಸಿದ ಹಿನ್ನೆಲೆಗಳಲ್ಲಿ ಉಲ್ಲೇಖ (3)ರಲ್ಲಿ ಹೊರಡಿಸಿದ ಅಧಿಸೂಚನೆಯಲ್ಲಿ ಕೆಳಗಿನಂತೆ ತಿದ್ದುಪಡಿ ಹಾಗೂ ಸೇರ್ಪಡೆಗಳನ್ನು ಮಾಡಿ, ಈ ಪರಿಷ್ಕೃತ ಅಧಿಸೂಚನೆಯನ್ನು ಹೊರಡಿಸಲಾಗಿದೆ.

| ಕ್ರಮ ಸಂಖ್ಯೆ | ಇಲಾಖೆ/ ಕಛೇರಿ ನಿರ್ದೇಶನಾಲಯದ ಮಟ್ಟದಲ್ಲಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ ಅಧಿಕಾರಿ |
|---|---|---|---|---|
| 1. | ಆಡಳಿತ ವಿಭಾಗಕ್ಕೆ ಸಂಬಂಧಪಟ್ಟಂತೆ | ಸಹಾಯಕ ನಿರ್ದೇಶಕರು (ಆಡಳಿತ) | ಜವಳಿ ಅಭಿವೃದ್ಧಿ ಆಯುಕ್ತರ ಪತ್ರಾಂಕಿತ ಸಹಾಯಕರು | ಜವಳಿ ಅಭಿವೃದ್ಧಿ ಆಯುಕ್ತರು |
| 2. | ಸಹಕಾರ ವಿಭಾಗಕ್ಕೆ ಸಂಬಂಧಪಟ್ಟಂತೆ | ಸಹಕಾರಿ ಸಂಘಗಳ ನಿರೀಕ್ಷಕರು | ಸಹಕಾರ ಸಂಘಗಳ ಜಂಟಿ ನಿಬಂಧಕ ಅಧಿಕಾರಿ | ಜವಳಿ ಅಭಿವೃದ್ಧಿ ಆಯುಕ್ತರು |
| 3.<br>(ಅ)<br>(ಆ) | ಯೋಜನೆಗಳಿಗೆ ಸಂಬಂಧಪಟ್ಟಂತೆ<br>ಜಂಟಿ ನಿರ್ದೇಶಕರು (ಕೈ & ಜ)<br>ಯೋಜನಾ ನಿರ್ದೇಶಕರು (ಕ.ಸಿ.ಉ.ನೀತಿ) | ಉಪನಿರ್ದೇಶಕರು (ಜವಳಿ)<br>ಉಪನಿರ್ದೇಶಕರು (ಕೈಮಗ್ಗ)<br>ಉಪ ನಿರ್ದೇಶಕರು (ಅಂಕಿ ಅಂಶ)<br>ಉಪನಿರ್ದೇಶಕರು (ತರಬೇತಿ)<br>ಉಪನಿರ್ದೇಶಕರು (ಬಂಡವಾಳ)<br>ಸಹಾಯಕ ನಿರ್ದೇಶಕರು (ಕೈಮಗ್ಗ)<br>ಸಹಾಯಕ ನಿರ್ದೇಶಕರು (ವಿ.ಮಗ್ಗ) | 1) ಜಂಟಿ ನಿರ್ದೇಶಕರು (ಕೈ & ಜವಳಿ)<br>2) ಯೋಜನಾ ನಿರ್ದೇಶಕರು (ಕ.ಸಿ.ಉ.ನೀತಿ) | ಜವಳಿ ಅಭಿವೃದ್ಧಿ ಆಯುಕ್ತರು |
| 4. | ಲೆಕ್ಕ ಪತ್ರ ಶಾಖೆ | ಅಧೀಕ್ಷಕರು (ನಗದು) | ಲೆಕ್ಕಾಧಿಕಾರಿಗಳು | ಜವಳಿ ಅಭಿವೃದ್ಧಿ ಆಯುಕ್ತರು |
| | **ಜಿಲ್ಲಾ ಮಟ್ಟದಲ್ಲಿ** | | | |
| 5. | ಬೆಂಗಳೂರು–ಗ್ರಾ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 6. | ಬೆಂಗಳೂರು–ನಗರ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 7. | ಬಾಗಲಕೋಟೆ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 8. | ಬಿಜಾಪುರ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 9. | ಬೆಳಗಾಂ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 10. | ಬೀದರ್ | ಜವಳಿ ತನಿಖಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |
| 11. | ಬಳ್ಳಾರಿ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 12. | ಚಾಮರಾಜನಗರ | ಜವಳಿ ಪ್ರವರ್ಧನಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |
| 13. | ಚಿತ್ರದುರ್ಗ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 14. | ಚಿಕ್ಕಮಗಳೂರು | ಜವಳಿ ತನಿಖಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |
| 15. | ದಕ್ಷಿಣ ಕನ್ನಡ | ಜವಳಿ ಪ್ರವರ್ಧನಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |

| ಕ್ರಮ ಸಂಖ್ಯೆ | ಇಲಾಖೆ/ ಕಛೇರಿ ನಿರ್ದೇಶನಾಲಯದ ಮಟ್ಟದಲ್ಲಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ ಅಧಿಕಾರಿ |
|---|---|---|---|---|
| 16. | ಧಾರವಾಡ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 17. | ಗದಗ್ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 18. | ಗುಲ್ಬರ್ಗಾ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 19. | ಹಾಸನ | ಜವಳಿ ಪ್ರವರ್ಧನಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |
| 20. | ಹಾವೇರಿ | ಜವಳಿ ಪ್ರವರ್ಧನಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |
| 21. | ಕೋಲಾರ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 22. | ಮಂಡ್ಯ | ಜವಳಿ ಪ್ರವರ್ಧನಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |
| 23. | ಮೈಸೂರು | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 24. | ಮಡಿಕೇರಿ | ಜವಳಿ ತನಿಖಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |
| 25. | ರಾಯಚೂರು | ಜವಳಿ ತನಿಖಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |
| 26. | ಕೊಪ್ಪಳ | ಜವಳಿ ಪ್ರವರ್ಧನಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |
| 27. | ಶಿವಮೊಗ್ಗ | ಜವಳಿ ಪ್ರವರ್ಧನಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |
| 28. | ತುಮಕೂರು | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 29. | ಕಾರವಾರ | ಜವಳಿ ತನಿಖಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |
| 30. | ದಾವಣಗೆರೆ | ಜವಳಿ ಪ್ರವರ್ಧನಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |
| 31. | ಉಡುಪಿ | ಜವಳಿ ತನಿಖಾಧಿಕಾರಿ | ಸಹಾಯಕ ನಿರ್ದೇಶಕರು | ಜಂ.ನಿ. (ಕೈ & ಜ) |
| 32. | ರಾಮನಗರ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |
| 33. | ಚಿಕ್ಕಬಳ್ಳಾಪುರ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂ.ನಿ. (ಕೈ & ಜ) |

ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ
ನಿರ್ದೇಶಕರು ಕೈಮಗ್ಗ ಮತ್ತು ಜವಳಿ.

ಪಿ.ಆರ್.126

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ/ ಕಾನಪ/ಎಫ್–10/08/1130, ದಿನಾಂಕ:9ನೇ ಜನವರಿ, 2008**

**ಅರ್ಜಿದಾರರು:**

1) ಶ್ರೀ ಶರಣಪ್ಪ S/o ಮೈಲಾರಪ್ಪ ಮುಂಡರಗಿ, ವಯಸ್ಸು–50.
2) ಶ್ರೀಮತಿ ನೀಲಮ್ಮ W/o ಶರಣಪ್ಪ ಮುಂಡರಗಿ ವಯಸ್ಸು–38.
ಸಾ: ಹಳ್ಳಿಗುಡಿ, ಮುಂಡರಗಿ ತಾ: ಗದಗ ಜಿಲ್ಲೆ.

**ಪ್ರತಿವಾದಿಗಳು:**

1) ದಿ ಬ್ರಾಂಚ್ ಮೇನೇಜರ್, ಯುನೈಟೆಡ್ ಇಂಡಿಯಾ ಇನ್ಸುರೆನ್ಸ್ ಕಂ.ಲಿ., ತೋಂಟದಾರ್ಯ ವಿದ್ಯಾಪೀಠ ಬಿಲ್ಡಿಂಗ್, ರೋಟರಿ ಸರ್ಕಲ್, ಪಿ.ಬಿ. ರಸ್ತೆ, ಗದಗ.
2) ಶ್ರೀ ಅಂದಪ್ಪ, ದೇವಪ್ಪ ಗಡ್ಡದ, ಸಾ: ಹಳ್ಳಿಗುಡಿ, ಮುಂಡರಗಿ ತಾ: ಗದಗ ಜಿಲ್ಲೆ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಶರಣಪ್ಪ S/o ಮೈಲಾರಪ್ಪ ಮುಂಡರಗಿ, (2) ಶ್ರೀಮತಿ ನೀಲಮ್ಮ W/o ಶರಣಪ್ಪ ಮುಂಡರಗಿ, ವಯಸ್ಸು–38, ಸಾ: ಹಳ್ಳಿಗುಡಿ, ಮುಂಡರಗಿ, ತಾ: ಗದಗ ಜಿಲ್ಲೆ, ಇವರು, ತಾವು ಮೃತ ಬಸವರಾಜ ಶರಣಪ್ಪ ಮುಂಡರಗಿ

ಇವರ ತಂದೆ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಸವರಾಜ ಶರಣಪ್ಪ ಮುಂಡರಗಿ ಇವರು ಎರಡನೇ ಪ್ರತಿವಾದಿಗಳಾದ ಶ್ರೀ ಅಂದಪ್ಪ ದೇವಪ್ಪ ಗೆಡ್ಡದ ಸಾ: ಹಳ್ಳಿಗುಡಿ, ಮುಂಡರಗಿ ತಾ: ಗದಗ ಜಿಲ್ಲೆ, ಇವರಲ್ಲಿ ಹಮಾಲ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ
ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು.

ಪಿ.ಆರ್.109

## ಕಂದಾಯ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಆರ್‌ಡಿ 93 ಎಎಸ್‌ಡಿ 2007(ಜಿ–2), ಬೆಂಗಳೂರು, ದಿನಾಂಕ:22ನೇ ಜನವರಿ, 2008**

ಶ್ರೀ ಆರ್. ಅಲ್ಲಪ್ಪ (ಪ.ಜಾ), ಶಿರಸ್ತೇದಾರ, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ ಇವರ ವಿರುದ್ಧ ದಾಖಲಾದ ಲೋಕಾಯುಕ್ತ ಪ್ರಕರಣದಲ್ಲಿ (ಸಿಸಿ ನಂ.2/97) ಪ್ರಿನ್ಸಿಪಾಲ್ ಸೆಶನ್ ಜಡ್ಜ್, ಕೋಲಾರ ಅವರು ಆಪಾದನೆಯಿಂದ ಮುಕ್ತಗೊಳಿಸಿ ದಿನಾಂಕ:31.01.2007ರಂದು ತೀರ್ಪು ನೀಡಿರುವರು. ಒಳಾಡಳಿತ ಇಲಾಖೆಯು ತನ್ನ ಪತ್ರಸಂಖ್ಯೆ: ಹೆಚ್‌ಡಿ 5562 ಹೆಚ್‌ಸಿಪಿ 2007 ದಿನಾಂಕ:17.05.2007ರಲ್ಲಿ ಮೇಲ್ಕಂಡ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸಲು ಅರ್ಹ ಪ್ರಕರಣವಲ್ಲವೆಂದು ನಿರ್ಣಯ ತೆಗೆದುಕೊಂಡಿದೆ. ಇದಲ್ಲದೆ ಸದರಿಯವರ ವಿರುದ್ಧ ಇದೇ ವಿಷಯಕ್ಕೆ ಸಂಬಂಧಿಸಿರುವಂತೆ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳು 1957ರ ನಿಯಮ 14ಎ ಅಡಿಯಲ್ಲಿ ಇಲಾಖಾ ವಿಚಾರಣೆಯನ್ನು ಲೋಕಾಯುಕ್ತರಿಗೆ ವಹಿಸಲಾಗಿತ್ತು. ಮಾನ್ಯ ಲೋಕಾಯುಕ್ತರು ವಿಚಾರಣೆ ನಂತರ ಆಪಾದನೆ ಸಾಬೀತಾಗಿಲ್ಲವೆಂದು ವರದಿ ನೀಡಿದ್ದರು. ಆದುದರಿಂದ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 61 ಬಿಎಂಎಂ 2003 ದಿನಾಂಕ:22.02.2003ರಲ್ಲಿ ಆರೋಪ ಮುಕ್ತರಾಗಿ ಆದೇಶಿಸಿದೆ. ಇವರು ಕ್ರಿಮಿನಲ್ ಮೊಕದ್ದಮೆಯಿಂದಲೂ ಹಾಗೂ ಇಲಾಖಾ ವಿಚಾರಣೆಯಿಂದಲೂ ದೋಷಮುಕ್ತರಾಗಿರುವುದರಿಂದ ಈ ಪ್ರಕರಣ ಇಲ್ಲದಿದ್ದಲ್ಲಿ ಇವರು ಯಾವ ಸೌಲಭ್ಯಗಳಿಗೆ ಅರ್ಹರಾಗುತ್ತಿದ್ದರೋ ಅವುಗಳನ್ನು ನೀಡಬೇಕಾಗುತ್ತದೆ.

ಶ್ರೀ ಆರ್. ಅಲ್ಲಪ್ಪ (ಪ.ಜಾ.) ಶಿರಸ್ತೇದಾರ ಇವರ ಜೇಷ್ಠತೆ ಸಂಖ್ಯೆ: 3842 ಆಗಿದ್ದು, ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಸಿದ್ಧಯ್ಯ (ಪ.ಜಾ.) ಜೇಷ್ಠತೆ ಸಂಖ್ಯೆ: 3843 ಇವರಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 37 ಎಎಸ್‌ಜಿ 95 ದಿನಾಂಕ:20.11.1995ರಲ್ಲಿ ತಹಶೀಲ್ದಾರ್ ಗ್ರೇಡ್–2 ವೃಂದಕ್ಕೆ ಬಡ್ತಿ ನೀಡಿದ್ದು, ಅವರು ದಿನಾಂಕ:29.11.1995ರಂದು ಕರ್ತವ್ಯಕ್ಕೆ ಹಾಜರಾಗಿರುವರು. ಶ್ರೀ ಆರ್. ಅಲ್ಲಪ್ಪ, ಶಿರಸ್ತೇದಾರ ಇವರಿಗಿಂತ ಜೇಷ್ಠತೆಯಲ್ಲಿ ತಮಗಿಂತ ಕಿರಿಯರಾದ ಶ್ರೀ ಸಿದ್ಧಯ್ಯ ಅವರಿಗೆ ತಹಶೀಲ್ದಾರ್ ಗ್ರೇಡ್–2 ವೃಂದಕ್ಕೆ ಬಡ್ತಿ ಹೊಂದಿದ ದಿನಾಂಕ:29.11.1995ರಿಂದ ಪೂರ್ವಾನ್ವಯ ಬಡ್ತಿ ಹೊಂದಲು ಎಲ್ಲಾ ಅರ್ಹತೆಯನ್ನು ಹೊಂದಿರುವರು.

ಆದುದರಿಂದ ಶ್ರೀ ಆರ್. ಅಲ್ಲಪ್ಪ, ಶಿರಸ್ತೇದಾರ ಇವರಿಗೆ ಕೆ.ಎಸ್.ಸಿ.ಎಸ್. (ಆರ್‌ಪಿಪಿಪಿ) ರೂಲ್ಸ್ 1978ರ ನಿಯಮ 2(1)(ಎ) ಅಡಿಯಲ್ಲಿ ತಹಶೀಲ್ದಾರ (ಗ್ರೇಡ್–2) ವೃಂದಕ್ಕೆ ದಿನಾಂಕ:29.11.1995 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಬಡ್ತಿ ನೀಡಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್.110

## ವಾಣಿಜ್ಯ ತೆರಿಗೆ ಜಂಟಿ ಆಯುಕ್ತರ ಕಛೇರಿ (ಆಡಳಿತ) ಡಿ.ವಿ.ಓ. ಮಲೆನಾಡು ವಿಭಾಗ, ಶಿವಮೊಗ್ಗ

## ಕರ್ನಾಟಕ ಮೌಲ್ಯವರ್ಧಿತ ತೆರಿಗೆಕಾಯ್ದೆಯ ನಿಯಮ 157 (g) ರ ಮೇರೆಗೆ ಅಧಿಸೂಚನೆ

**ಕ್ರ.ಸಂ. ವಾ.ತೆ.ಜಂ.ಆ.(ಆ)/ ಮ.ವಿ./ಶಿ./ಕಾ–2/ಪ್ರ–5/2006–07, ದಿನಾಂಕ:16ನೇ ಜನವರಿ, 2008**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಮೆ: ಶ್ರೀ ಕೃಷ್ಣ ಎಂಟರ್ ಪ್ರೈಸರ್ಸ್, ಟೆಂಪೊ ಸ್ಟ್ಯಾಂಡ್, ಎನ್.ಟಿ. ರಸ್ತೆ ಶಿವಮೊಗ್ಗ ಟಿನ್ ಸಂಖ್ಯೆ:–29250231559 ಇವರಿಗೆ ವೇಸ್ಟ್ ಪೇಪರ್ ಸರಕಿನ ವ್ಯವಹಾರಕ್ಕಾಗಿ ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ ಕಾಯ್ದೆ ಅಡಿ ನೀಡಲಾದ ಶಾಸನಬದ್ಧ ನಮೂನೆ VAT-505 ಗಳ ಪೈಕಿ 1634669 ರಿಂದ 1634675 ರ ವರೆಗಿನ ಸಂಖ್ಯೆಯ ಉಪಯೋಗಿಸದೇ ಇರುವ ಹಾಳೆಗಳನ್ನು ತ್ರಿಪ್ರತಿಯಲ್ಲಿ ದಿನಾಂಕ:08.10.2007 ರಂದು ಕಳೆದು ಹೋಗಿರುವುದಾಗಿ ತಿಳಿಸಿರುತ್ತಾರೆ.

ಯಾವುದೇ ವ್ಯಕ್ತಿ/ ವರ್ತಕರಿಗೆ ಸದರಿ ಶಾಸನ ಬದ್ಧ ನಮೂನೆಗಳು ದೊರೆತು ಅವುಗಳನ್ನು ಉಪಯೋಗಿಸಿದಲ್ಲಿ, ಕಾನೂನು ಉಲ್ಲಂಘನೆಯಾಗುವುದರಿಂದ ದಂಡ/ ಶಿಕ್ಷೆಗೆ ಒಳಪಡಬೇಕಾಗುತ್ತದೆ. ಆದ್ದರಿಂದ ಸದರಿ ಶಾಸನ ಬದ್ಧ ನಮೂನೆ VAT-505 ಯಾರಿಗಾದರೂ ದೊರೆತಲ್ಲಿ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ) ಮೌಲ್ಯ ವರ್ಧಿತ ತೆರಿಗೆ ವಿಭಾಗ ಶಿವಮೊಗ್ಗ ಇವರಿಗೆ ಹಿಂತಿರುಗಿಸಲು ದೂರವಾಣಿ 08182 271461ರ ಮೂಲಕ ಸಂಪರ್ಕಿಸಲು ಕೋರಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.111

**ಓ. ಕಸ್ತೂರಪ್ಪ**

ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ)

ಮೌಲ್ಯವರ್ಧಿತ ತೆರಿಗೆ ವಿಭಾಗ, ಶಿವಮೊಗ್ಗ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಾ ನಿರ್ದೇಶನಾಲಯದ ನಡವಳಿಗಳು

### ಸಂಖ್ಯೆ: ಡಿಪಿಎನ್: (12) ಸಿಆರ್:19:03–04

**ವಿಷಯ:** ಶ್ರೀ ಮನೋಹರ ಎಸ್. ಮುತ್ತಗೇಕರ, ಗ್ರೂಫ್ 'ಡಿ' ನಿವೃತ್ತ ನೌಕರ, ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಅಂತಿಮ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:** 1) ಜಿಲ್ಲಾ ಶಸ್ತ್ರ ಚಿಕಿತ್ಸಕರು, ಬೆಳಗಾವಿ, ಇವರ ಆದೇಶ ಸಂಖ್ಯೆ: ಸಿಬ್ಬಂದಿ:2:58:3455:02–03, ದಿನಾಂಕ:23.07.2002.
2) ನೌಕರರ ಮೇಲ್ಮನವಿ ದಿನಾಂಕ: ಆಗಸ್ಟ್ 2003.
3) ನಿರ್ದೇಶನಾಲಯದ ಪತ್ರ ಸಮಸಂಖ್ಯೆಯ ದಿನಾಂಕ:02.11.2004.
4) ಜಿಲ್ಲಾ ಶಸ್ತ್ರ ಚಿಕಿತ್ಸಕರು, ಬೆಳಗಾವಿ, ಇವರ ಪತ್ರಸಂಖ್ಯೆ: ಜಿಆಬೆ: ಸಿಬ್ಬಂದಿ:4: ಸಿಆರ್–9:04–05, ದಿನಾಂಕ:11.04.2005.
5) ನಿರ್ದೇಶನಾಲಯದ ಪತ್ರ ಸಮ ಸಂಖ್ಯೆಯ ದಿನಾಂಕ:30.07.2005.
6) ಜಿಲ್ಲಾ ಶಸ್ತ್ರ ಚಿಕಿತ್ಸಕರು, ಬೆಳಗಾವಿ, ಇವರ ಪತ್ರಸಂಖ್ಯೆ: ಜಿಅಬೆ: ಸಿಬ್ಬಂದಿ: (4) ಸಿಆರ್–76: 07–08, 01.10.2007.

**ಪ್ರಸ್ತಾವನೆ:**

ಶ್ರೀ ಮನೋಹರ್ ಎಸ್. ಮುತ್ತಗೇಕರ, ಗ್ರೂಪ್ 'ಡಿ' ಇವರು ಜಿಲ್ಲಾ ಆಸ್ಪತ್ರೆ, ಬೆಳಗಾವಿ, ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:

1) 12.11.75 ರಿಂದ 31.12.75 ರವರೆಗೆ
2) 20.05.85 ರಿಂದ 03.07.85 ರವರೆಗೆ
3) 03.08.86 ರಿಂದ 15.08.88 ರವರೆಗೆ
4) 29.03.95 ರಿಂದ 15.04.97 ರವರೆಗೆ ಮತ್ತು
5) 02.06.99 ರಿಂದ 20.07.02 ರವರೆಗೆ

ಸರ್ಕಾರದ ಕೆಲಸಕ್ಕೆ ಅನಧಿಕೃತ ಗೈರು ಹಾಜರಿಯಾಗಿರುವ ಆರೋಪದ ಮೇರೆಗೆ ಮೇಲೆ ಓದಲಾದ (1)ರ ಆದೇಶದಲ್ಲಿ ಸರ್ಕಾರದ ಸೇವೆಯಿಂದ ವಜಾ ಮಾಡಲಾಗಿತ್ತು.

ಸದರಿ ವಜಾ ಆದೇಶದ ಮೇಲೆ ನೌಕರರು ಮೇಲೆ ಓದಲಾದ (2)ರ ಪತ್ರದಲ್ಲಿ ನಿರ್ದೇಶನಾಲಯಕ್ಕೆ ಮೇಲ್ಮನವಿ ಸಲ್ಲಿಸಿದ್ದು, ನೌಕರರ ಮನವಿಯನ್ನು ಪರಿಗಣಿಸಿ, ಬೇರೆ ವಿಚಾರಣಾಧಿಕಾರಿಯವರಿಂದ ಮರು ವಿಚಾರಣೆ ನಡೆಸಿ, ವರದಿ ಸಲ್ಲಿಸುವಂತೆ ತಿಳಿಸಿ, ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಲಾಗಿತ್ತು. ಅದರಂತೆ ಜಿಲ್ಲಾ ಶಸ್ತ್ರ ಚಿಕಿತ್ಸಕರು, ಬೆಳಗಾವಿ, ಇವರು ಮರು ವಿಚಾರಣೆ ನಡೆಸಿ, ಮೇಲೆ ಓದಲಾದ (4)ರ ಪತ್ರದಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಸದರಿ ವಿಚಾರಣಾ ವರದಿಯನ್ನು ಮೇಲೆ ಓದಲಾದ (5) ರಲ್ಲಿ ಓದಲಾದ ಪತ್ರದಲ್ಲಿ ನೌಕರರಿಗೆ ಜಾರಿ ಮಾಡಿ ಸ್ವೀಕೃತಿಯನ್ನು ಸಲ್ಲಿಸುವಂತೆ, ತಿಳಿಸಿದುದರ ಮೇಲೆ (6)ರಲ್ಲಿ ಓದಲಾದ ಪತ್ರದಲ್ಲಿ ನೌಕರರಿಗೆ ಸದರಿ ವಿಚಾರಣಾ ವರದಿಯನ್ನು ಮುದ್ದಾಂ ಜಾರಿ ಮಾಡಲಾಗಿದ್ದು, ನೌಕರರು ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ನೌಕರರ ಅನಧಿಕೃತ ಗೈರು ಹಾಜರಿಯ ಬಗೆಗಿನ ವಿಚಾರಣಾ ವರದಿಯನ್ನು ಪರಿಶೀಲಿಸಿದ್ದು, ದಂಡನೆಯ ಆದೇಶವನ್ನು ಹೊರಡಿಸಬೇಕಾಗಿರುವುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಡಿಪಿಎನ್:(12) ಸಿಆರ್–19: 03–04, ದಿನಾಂಕ:24ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಡಾ: ಬಿ.ಎಸ್. ಪ್ರೇಮಲೀಲ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಆದ ನಾನು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮನೋಹರ ಎಸ್. ಮುತ್ತಗೇಕರ, ಗ್ರೂಪ್ 'ಡಿ' ಜಿಲ್ಲಾ ಆಸ್ಪತ್ರೆ, ಬೆಳಗಾವಿ ಇವರನ್ನು ದಿನಾಂಕ:23.07.2002ರ ಆದೇಶದಲ್ಲಿ ಜಿಲ್ಲಾ ಶಸ್ತ್ರ ಚಿಕಿತ್ಸಕರು, ಬೆಳಗಾವಿ, ಇವರು ವಜಾ ಮಾಡಿರುವ ಆದೇಶವನ್ನು ಎತ್ತಿ ಹಿಡಿದು, ಸ್ಥಿರೀಕರಿಸಿರುತ್ತೇನೆ.

**ಡಾ: ಬಿ.ಎಸ್. ಪ್ರೇಮಲೀಲ**

ಪಿ.ಆರ್.116

ನಿರ್ದೇಶಕರು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು–9.

## ಕಂದಾಯ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಕಂಇ 75 ಆರ್‌ಇಹೆಚ್ 2007, ಬೆಂಗಳೂರು, ದಿನಾಂಕ:14ನೇ ಡಿಸೆಂಬರ್, 2007**

ದಿನಾಂಕ:16.06.2007ರಂದು ನಡೆದ ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರದ 72ನೇ ಸಭೆಯ ನಡವಳಿಗಳಲ್ಲಿ ವಿಷಯ ಸಂಖ್ಯೆ (2)ರಲ್ಲಿ ಬಾಗಲಕೋಟೆ ಜಿಲ್ಲೆಗೆ ಮಂಜೂರಾಗಿರುವ ತೋಟಗಾರಿಕೆ ವಿಶ್ವವಿದ್ಯಾಲಯವನ್ನು ಸ್ಥಾಪನೆ ಮಾಡಲು ಬಾಗಲಕೋಟೆ ನವನಗರದಲ್ಲಿ ಯೂನಿಟ್–2ರ ಪಕ್ಕದಲ್ಲಿ ಖಾಲಿಯಿರುವ 719 ಎಕರೆ ಜಮೀನನ್ನು ತೋಟಗಾರಿಕೆ ಇಲಾಖೆಗೆ ಹಸ್ತಾಂತರಿಸಲು ಕೈಗೊಳ್ಳಲಾಗಿರುವ ಠರಾವನ್ನು ಸರ್ಕಾರವು ಈ ಮೂಲಕ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದ ವರೆಗೆ ತಡೆಹಿಡಿದಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.113

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪುನರ್ವಸತಿ)

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

**ನಂ.ಎಲ್.ಎನ್.ಡಿ(ಎನ್.ಎ) ಸಿ.ಆರ್: 197: 07–08, ಬೆಂಗಳೂರು, ದಿನಾಂಕ:22ನೇ ಜನವರಿ, 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಸಾತನೂರು ಗ್ರಾಮದ, ಸ.ನಂ.54ರಲ್ಲಿ 3.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ. 265 ಎಲ್.ಜಿ.ಬಿ. 2007 (ಭಾಗ–6) ದಿನಾಂಕ:18.10.2007.

2) ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ: (ಎನ್.ಎ) ಸಿ.ಆರ್.: 471/ 07–08, ದಿನಾಂಕ:22.10.2007.

3) ವ್ಯವಸ್ಥಾಪಕ ನಿರ್ದೇಶಕರು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ರವರ ಪತ್ರದ ಸಂಖ್ಯೆ: ಬೆಂಮಸಾಸಂ: ಕೇಕ: ವಾಣಿಜ್ಯ: ಆಸ್ತಿ: 2402/ 07–08, ದಿನಾಂಕ:07.01.2008.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3313–28 ಎಕರೆಗಳಲ್ಲಿ ವಿವಿಧ ಸಾರ್ವಜನಿಕ/ ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಅಗತ್ಯವಾಗಿರುವ ಹಿನ್ನೆಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ ಉಲ್ಲೇಖ (1) ರಲ್ಲಿನ ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ. 265 : ಎಲ್.ಜಿ.ಬಿ. 2007 (ಭಾಗ–6), ಬೆಂಗಳೂರು, ದಿನಾಂಕ:18.10.2007 ರ ಆದೇಶದಲ್ಲಿ ಬೆಂಗಳೂರು ಉತ್ತರ (ಆಪರ) ತಾಲ್ಲೂಕು, ಜಾಲ ಹೋಬಳಿ, ಸಾತನೂರು ಗ್ರಾಮದ, ಸ.ನಂ.54ರಲ್ಲಿ 3.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಬೆಲೆ ನಿಗದಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1) (ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕವನ್ನು ಸೇರಿ ಒಟ್ಟು ರೂ.87,72,775–00 (ಎಂಬತ್ತೇಳು ಲಕ್ಷದ ಎಪ್ಪತ್ತೆರಡು ಸಾವಿರದ ಏಳುನೂರ ಎಪ್ಪತ್ತೈದು ರೂ.ಗಳು ಮಾತ್ರ) ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ದಿನಾಂಕ:13.11.2007ರಂದು ತಿಳುವಳಿಕೆ ನೀಡಲಾಗಿತ್ತು. ಅದರಂತೆ ಮೇಲ್ಕಂಡ ಸಂಸ್ಥೆಯವರು ಸರ್ಕಾರಕ್ಕೆ ಚಲನ್ ನಂ.800262, 800263, 800264, ದಿನಾಂಕ:04.01.2008ರಲ್ಲಿ ಹಣವನ್ನು ಸಂದಾಯ ಮಾಡಿ, ಮೂಲ ಚಲನ್ ಹಾಜರುಪಡಿಸಿದ್ದು ಭೂ ಮಂಜೂರಾತಿ ಆದೇಶವನ್ನು ನೀಡಬೇಕೆಂದು ಉಲ್ಲೇಖ (3)ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಸಾತನೂರು ಗ್ರಾಮದ, ಸ.ನಂ.54 ರಲ್ಲಿ 3.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

### ಷರತ್ತುಗಳು

1) ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.

2) ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.

3) ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.

4) ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆಗೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತೀರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.

5) ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.

6) ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.

7) ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

8) ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದರೆ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.

9) ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.

10) ಶಾಸನಬದ್ಧ ಕಾಯ್ದೆಗಳ ಕಟ್ಟು ಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

11) ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.

12) ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

13) ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2) ರಡಿಯಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ, ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.117

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

**ನಂ.ಎಲ್.ಎನ್.ಡಿ(ಎನ್.ಎ) ಸಿ.ಆರ್: 219: 07–08, ಬೆಂಗಳೂರು, ದಿನಾಂಕ:22ನೇ ಜನವರಿ, 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಮಾದಪ್ಪನಹಳ್ಳಿ ಗ್ರಾಮದ, ಸ.ನಂ.58ರಲ್ಲಿ 25.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ. 265 ಎಲ್.ಜಿ.ಬಿ. 2007 (ಭಾಗ–6) ದಿನಾಂಕ:18.10.2007.

2) ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ: (ಎನ್.ಎ) ಸಿ.ಆರ್.: 459/ 07–08, ದಿನಾಂಕ:13.11.2007.

3) ವ್ಯವಸ್ಥಾಪಕ ನಿರ್ದೇಶಕರು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ರವರ ಪತ್ರದ ಸಂಖ್ಯೆ: ಬೆಂಮಸಾಸಂ: ಕೇಕ: ವಾಣಿಜ್ಯ: ಆಸ್ತಿ: 2434/ 07–08, ದಿನಾಂಕ:09.01.2008.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3313–28 ಎಕರೆಗಳಲ್ಲಿ ವಿವಿಧ ಸಾರ್ವಜನಿಕ/ ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಅಗತ್ಯವಾಗಿರುವ ಹಿನ್ನೆಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ ಉಲ್ಲೇಖ (1) ರಲ್ಲಿನ ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ. 265 : ಎಲ್.ಜಿ.ಬಿ. 2007 (ಭಾಗ–6), ಬೆಂಗಳೂರು, ದಿನಾಂಕ:18.10.2007 ರ ಆದೇಶದಲ್ಲಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಮಾದಪ್ಪನಹಳ್ಳಿ ಗ್ರಾಮದ, ಸ.ನಂ.58ರಲ್ಲಿ 25.00 ಎಕರೆ ಜಮೀನನ್ನು

ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಬೆಲೆ ನಿಗದಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1) (ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕವನ್ನು ಸೇರಿ ಒಟ್ಟು ರೂ.1,81,06,055-00 (ಒಂದು ಕೋಟಿ ಎಂಭತ್ತೊಂದು ಸಾವಿರದ ಆರು ಸಾವಿರದ ಐವತ್ತೈದು ರೂ.ಗಳು ಮಾತ್ರ) ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ದಿನಾಂಕ:13.11.2007ರಂದು ತಿಳುವಳಿಕೆ ನೀಡಲಾಗಿತ್ತು. ಅದರಂತೆ ಮೇಲ್ಕಂಡ ಸಂಸ್ಥೆಯವರು ಸರ್ಕಾರಕ್ಕೆ ಚಲನ್ ನಂ.151223, 151222, 151221, ದಿನಾಂಕ:07.01.2008ರಲ್ಲಿ ಹಣವನ್ನು ಸಂದಾಯ ಮಾಡಿ, ಮೂಲ ಚಲನ್ ಹಾಜರುಪಡಿಸಿದ್ದು ಭೂ ಮಂಜೂರಾತಿ ಆದೇಶವನ್ನು ನೀಡಬೇಕೆಂದು ಉಲ್ಲೇಖ (3)ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಮಾದಪ್ಪನಹಳ್ಳಿ ಗ್ರಾಮದ, ಸ.ನಂ.58 ರಲ್ಲಿ 25.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1) ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.

2) ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.

3) ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.

4) ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆಗೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತೀರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.

5) ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.

6) ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.

7) ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

8) ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದರೆ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.

9) ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.

10) ಶಾಸನಬದ್ಧ ಕಾಯ್ದೆಗಳ ಕಟ್ಟು ಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

11) ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆಬಾಳುವ ನಿಧಿ, ನಿಕ್ಷೇಪಇತ್ಯಾದಿಗಳನ್ನು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.

12) ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

13) ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2) ರಡಿಯಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ, ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಪಿ.ಆರ್.118 ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

**ನಂ.ಎಲ್.ಎನ್.ಡಿ(ಎನ್.ಎ) ಸಿ.ಆರ್: 215: 07-08, ಬೆಂಗಳೂರು, ದಿನಾಂಕ:22ನೇ ಜನವರಿ, 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಬಾಗಲೂರು ಗ್ರಾಮದ, ಸ.ನಂ.271ರಲ್ಲಿ 13.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ. 265 ಎಲ್.ಜಿ.ಬಿ. 2007 (ಭಾಗ-6) ದಿನಾಂಕ:18.10.2007.

2) ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ: (ಎನ್.ಎ) ಸಿ.ಆರ್.: 474/ 07-08, ದಿನಾಂಕ:22.10.2007.

3) ವ್ಯವಸ್ಥಾಪಕ ನಿರ್ದೇಶಕರು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ರವರ ಪತ್ರದ ಸಂಖ್ಯೆ: ಬೆಂಮಸಾಸಂ: ಕೇಕ: ವಾಣಿಜ್ಯ: ಆಸ್ತಿ: 2288/ 07-08, ದಿನಾಂಕ:24.12.2008.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3313-28 ಎಕರೆಗಳಲ್ಲಿ ವಿವಿಧ ಸಾರ್ವಜನಿಕ/ ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಅಗತ್ಯವಾಗಿರುವ ಹಿನ್ನೆಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ ಉಲ್ಲೇಖ (1) ರಲ್ಲಿನ ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ. 265 : ಎಲ್.ಜಿ.ಬಿ. 2007 (ಭಾಗ-6), ಬೆಂಗಳೂರು, ದಿನಾಂಕ:18.10.2007 ರ ಆದೇಶದಲ್ಲಿ ಬೆಂಗಳೂರು ಉತ್ತರ (ಆಪರ) ತಾಲ್ಲೂಕು, ಜಾಲ ಹೋಬಳಿ, ಬಾಗಲೂರು ಗ್ರಾಮದ, ಸ.ನಂ.271ರಲ್ಲಿ 13.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಬೆಲೆ ನಿಗದಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1) (ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕವನ್ನು ಸೇರಿ ಒಟ್ಟು ರೂ.3,44,42,905-00 (ಮೂರು ಕೋಟಿ ನಲವತ್ತನಾಲ್ಕು ಲಕ್ಷದ ನಲವತ್ತೆರಡು ಸಾವಿರದ ಒಂಬೈನೂರ ಐದು ರೂ.ಗಳು ಮಾತ್ರ) ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ದಿನಾಂಕ:13.11.2007ರಂದು ತಿಳುವಳಿಕೆ ನೀಡಲಾಗಿತ್ತು. ಅದರಂತೆ ಮೇಲ್ಕಂಡ ಸಂಸ್ಥೆಯವರು ಸರ್ಕಾರಕ್ಕೆ ಚಲನ್ ನಂ.643512, 643514, 643516, ದಿನಾಂಕ:18.12.2007ರಲ್ಲಿ ಹಣವನ್ನು ಸಂದಾಯ ಮಾಡಿ, ಮೂಲ ಚಲನ್ ಹಾಜರುಪಡಿಸಿದ್ದು ಭೂ ಮಂಜೂರಾತಿ ಆದೇಶವನ್ನು ನೀಡಬೇಕೆಂದು ಉಲ್ಲೇಖ (3)ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಬಾಗಲೂರು ಗ್ರಾಮದ, ಸ.ನಂ.271 ರಲ್ಲಿ 13.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

### ಷರತ್ತುಗಳು

1) ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.

2) ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.

3) ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.

4) ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆಗೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತೀರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.

5) ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.

6) ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.

7) ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

8) ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದರೆ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.

9) ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.

10) ಶಾಸನಬದ್ಧ ಕಾಯ್ದೆಗಳ ಕಟ್ಟು ಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

11) ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.

12) ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

13) ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2) ರಡಿಯಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ, ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.119

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಾ ನಿರ್ದೇಶನಾಲಯದ ನಡವಳಿಗಳು

**ವಿಷಯ:** ಶ್ರೀಮತಿ ಎಂ. ಕಲ್ಯೆವಾಣಿ, ಶುಶ್ರೂಷಕಿ, ಪ್ರಾಥಮಿಕ ಆರೋಗ್ಯ ಕೇಂದ್ರ ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ, ಇವರ ಅನಧಿಕೃತ ಗೈರು ಹಾಜರಿ ಹಾಗೂ ಖೊಟ್ಟಿ ಪ್ರಮಾಣ ಪತ್ರ ಸೃಷ್ಟಿಸಿರುವ ಆರೋಪಗಳಿಗೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:** 1) ನೌಕರರಿಗೆ ದೋಷಾರೋಪಣೆ ಜಾರಿ ಮಾಡಿ ವಿವರಣೆ ಕೇಳಿದ ದಿನಾಂಕ:22.10.02.

2) ನೌಕರರ ಮೇಲಿನ ಆರೋಪದ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸುವಂತೆ ತಿಳಿಸಿ ವಿಚಾರಣಾಧಿಕಾರಿ ನೇಮಕ ಮಾಡಿದ ದಿನಾಂಕ:12.12.02.

3) ವಿಚಾರಣಾಧಿಕಾರಿಯವರ ವಿಚಾರಣಾ ವರದಿ ಸಂಖ್ಯೆ: ಮುಜಾಅ: ಜಾಕೋ: ಎನ್‌ಬಿ:215:02–03, ದಿನಾಂಕ:–.07.07.

4) ವಿಚಾರಣಾ ವರದಿಯನ್ನು ನೌಕರರಿಗೆ ಜಾರಿ ಮಾಡಿದ ದಿನಾಂಕ:01.08.07.

5) ಕನ್ನಡ ಪ್ರಭ ಪತ್ರಿಕೆಯಲ್ಲಿ ವಿಷಯ ಪ್ರಕಟಿಸಿದ ದಿನಾಂಕ:28.06.2006.

6) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ಚಿಕ್ಕಮಗಳೂರು ಇವರ ಪತ್ರಸಂಖ್ಯೆ: ಆಕುಕ: ಸಿವಿ(3):42: 07–08, ದಿನಾಂಕ:05.10.2007.

**ಪ್ರಸ್ತಾವನೆ:**

ಶ್ರೀಮತಿ ಎಂ. ಕಲ್ಯೆವಾಣಿ, ಶುಶ್ರೂಷಕಿ, ಇವರು ಕಿಮ್ಸ್ ಆಸ್ಪತ್ರೆ, ಹುಬ್ಬಳ್ಳಿ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ:14.01.2002 ರಿಂದ ಮೇಲಾಧಿಕಾರಿಗಳಿಂದ ಪೂರ್ವಾನುಮತಿ ಪಡೆಯದೆ ಸರ್ಕಾರದ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾಗಿರುವ ಬಗ್ಗೆ ಹಾಗೂ ಖೊಟ್ಟಿ ಪ್ರಮಾಣ ಪತ್ರಗಳನ್ನು ಸೃಷ್ಟಿಸಿ, ಬ್ಯಾಂಕ್‌ಗಳಿಂದ ಸಾಲ ಪಡೆದಿರುವ ಬಗ್ಗೆ ದೋಷಾರೋಪಣೆಯನ್ನು ಜಾರಿ ಮಾಡಿ ವಿವರಣೆಯನ್ನು ನೀಡುವಂತೆ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೇಳಲಾಗಿತ್ತು. ಆದರೆ ನೌಕರರು ವಿವರಣೆಯನ್ನು ನೀಡಿರುವುದಿಲ್ಲ. ದಾಖಲೆಗಳಲ್ಲಿರುವ ವಿಷಯ ಸಾಮಗ್ರಿಗಳಿಂದ ನೌಕರರು ಮೇಲಿನ ಆರೋಪಗಳು ಮೇಲ್ನೋಟಕ್ಕೆ ಸತ್ಯ ಎಂದು ಕಂಡು ಬಂದಿರುವುದರಿಂದ ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಮುಖ್ಯ ಜಾಗೃತ ಅಧಿಕಾರಿಯವರನ್ನು ವಿಚಾರಣಾಧಿಕಾರಿಯಾಗಿ ನೇಮಕ ಮಾಡಿ ವಿಚಾರಣಾ ವರದಿಯನ್ನು ಮೂರು ತಿಂಗಳೊಳಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದರಂತೆ ವಿಚಾರಣಾಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ವರದಿಯಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ನೌಕರರಿಗೆ ಜಾರಿ ಮಾಡಿ ಸ್ವೀಕೃತಿ ಕಳುಹಿಸುವಂತೆ ಮೇಲೆ ಓದಲಾದ (4)ರ ಪತ್ರದಲ್ಲಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಯವರು ಸದರಿ ವಿಚಾರಣಾ ವರದಿಯನ್ನು ನೌಕರರಿಗೆ ನೋಂದಣಿ ಅಂಚೆ ಇಲಾಖೆಯಿಂದ 'ಲೆಫ್ಟ್, ನಾಟ್ ನೋನ್' ಎಂಬ ಷರಾದೊಂದಿಗೆ ವಾಪಸ್ಸು ಬಂದಿರುವುದಾಗಿ ವರದಿ ಮಾಡಿರುತ್ತಾರೆ.

ಪುನಃ ನೌಕರರು ಪ್ರಾಥಮಿಕ ಆರೋಗ್ಯ ಕೇಂದ್ರ, ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ ಇಲ್ಲಿ ಕಾರ್ಯನಿರ್ವಹಿಸುತ್ತಿರುವಾಗ ದಿನಾಂಕ:05.12.2005 ಮತ್ತು 06.12.2005 ರಂದು ಪರಿವರ್ತಿತ ರಜೆಗೆ ಅರ್ಜಿ ಸಲ್ಲಿಸಿ ದಿನಾಂಕ:07.12.2005 ರಿಂದ ಈ ವರೆವಿಗೂ ಅನಧಿಕೃತವಾಗಿ ಗೈರು ಹಾಜರಿಯಾಗಿದ್ದು ಈ ಬಗ್ಗೆ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಚಿಕ್ಕಮಗಳೂರು, ಇವರು ದೋಷಾರೋಪಣೆಯನ್ನು ಜಾರಿ ಮಾಡಿದ್ದು, ದಿನಾಂಕ:28.06.2006 ರ ಕನ್ನಡ ಪ್ರಭ ಪತ್ರಿಕೆಯಲ್ಲಿ ನೌಕರರ ಅನಧಿಕೃತ ಗೈರು ಹಾಜರಿ ಬಗ್ಗೆ ಏಕೆ ವಜಾಗೊಳಿಸಬಾರದೆಂಬುದಕ್ಕೆ ಪ್ರಕಟಣೆಗೊಳಿಸಿರುತ್ತಾರೆ. ಈ ಬಗ್ಗೆ ಮೇಲೆ ಓದಲಾದ (6)ರ ಪತ್ರದಲ್ಲಿ ವಿವರಣೆ ನೀಡಿರುತ್ತಾರೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಹಾಗೂ ನೌಕರರು ಪದೇ ಪದೇ ಸರ್ಕಾರದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾಗುತ್ತಿದ್ದು ಸರ್ಕಾರದ ಕೆಲಸಕ್ಕೆ ತೊಂದರೆಯಾಗುತ್ತಿರುವುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಡಿಪಿಎನ್ (13): ಸಿಆರ್:24: 02–03, ದಿನಾಂಕ:10ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಡಾ: ಬಿ.ಎಸ್. ಪ್ರೇಮಲೀಲ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಆದ ನಾನು ಕರ್ನಾಟಕ ನಾಗರೀಕ ಸೇವಾ ನಿಯಮಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀಮತಿ ಎಂ. ಕಲೈವಾಣಿ, ಶುಶ್ರೂಷಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ, ಇವರನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಇದೇ ನಿಯಮಾವಳಿಯ ನಿಯಮ 8(viii)ರನ್ವಯ ಸರ್ಕಾರದ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಸೇವೆಯಿಂದ ವಜಾ ಮಾಡಿರುತ್ತೇನೆ.

**ಡಾ: ಬಿ.ಎನ್. ಪ್ರೇಮಲೀಲ**
ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

ಪಿ.ಆರ್.88

## ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಬೆಂಗಳೂರು ರವರ ನಡವಳಿಗಳು

**ವಿಷಯ:** ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕು ಪೆಮ್ಮನಹಳ್ಳಿ ಗ್ರಾಮದಲ್ಲಿ ಕಪ್ಪು ಗ್ರಾನೈಟ್‌ಗಾಗಿ ಮೆ: ಅಮ್ಮನ್ ಗ್ರಾನೈಟ್ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:490ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.1,22,044/– ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಓದಲಾಗಿದೆ:** 1) ಕ.ಉ.ಖ.ರಿ.ನಿ. 94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ನೋಟೀಸ್ ಸಂಖ್ಯೆ: ಗಭೂಇ: ಡಿಸಿಬಿ: ಕಗಗು: 490: 2007–08/ 5877/ 5878 ದಿನಾಂಕ:11.01.2005.

2) ಹಿರಿಯ ಭೂವಿಜ್ಞಾನಿ, ಹಾಸನ ರವರ ಪತ್ರ ಸಂಖ್ಯೆ: 494 ಗಭೂಇ: ಡಿಸಿಬಿ: ಕಗಗು: 490: 2007–08/ ದಿನಾಂಕ:28.08.2007.

**ಪ್ರಸ್ತಾವನೆ:**

ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕು ಪೆಮ್ಮನಹಳ್ಳಿ ಗ್ರಾಮದ ಸರ್ವೆ ನಂ.34ರಲ್ಲಿ ಮೆ: ಅಮ್ಮನ್ ಗ್ರಾನೈಟ್ ರವರಿಗೆ 1.20 ಎಕರೆಗೆ ದಿನಾಂಕ:19.01.2002 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟಿಸು ಸಂಖ್ಯೆ: ಗಭೂಇ: ಡಿಸಿಬಿ : ಕಗಗು/ 490/ ದಿನಾಂಕ:11.01.2005 ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 06–07 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,22,044/– ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರಿಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ನಿಯಮ 6(1) ಹಾಗೂ ನಿಯಮ 39ರಡಿ ನೋಟೀಸು ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆಯನ್ನು ನಿಷ್ಕ್ರಿಯವಾಗಿರುವುದರಿಂದ ಈ ಬಗ್ಗೆ ಸಮಜಾಯಿಸಿ ಬಂದಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಉಲ್ಲೇಖಿತ ನೋಟಿಸುಗಳಿಗೆ ಗುತ್ತಿಗೆದಾರರು ಯಾವ ರೀತಿಯೂ ಸ್ಪಂದಿಸುತ್ತಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ:02.07.1994 ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 490 ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ: ಗಭೂಇ: ಡಿಸಿಬಿ: ಕಗಗು: 490: 2007–08/ 5941, ದಿನಾಂಕ:9ನೇ ಜನವರಿ, 2008**

ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಡಿಯಲ್ಲಿ ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕು ಪೆಮ್ಮನಹಳ್ಳಿ ಗ್ರಾಮದ ಸರ್ವೆ ನಂ.34ರಲ್ಲಿ 1.20 ಎಕರೆಗೆ ಕಪ್ಪು ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 490 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ.

ಪಿ.ಆರ್.74

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಬೆಂಗಳೂರು ರವರ ನಡವಳಿಗಳು**

**ವಿಷಯ:** ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕು ಶ್ರೀಗೋಡು ಗ್ರಾಮದಲ್ಲಿ ಕಪ್ಪು ಗ್ರಾನೈಟ್‌ಗಾಗಿ ಶ್ರೀ ನವಾಬಸಾಬ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:482ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.1,31,395/– ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ :** 1) ಕ.ಉ.ಖ.ರಿ.ನಿ. 94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ನೋಟೀಸ್ ಸಂಖ್ಯೆ: ಗಭೂಇ: ಡಿಸಿಬಿ: ಕಗಗು: 482: 2007–08/ 1417–18/ ದಿನಾಂಕ:26.05.2007.

2) ಹಿರಿಯ ಭೂವಿಜ್ಞಾನಿ, ಹಾಸನ ರವರ ಪತ್ರ ಸಂಖ್ಯೆ: 482 ಗಭೂಇ: ಡಿಸಿಬಿ: ಕಗಗು: 482: 2007–08/ ದಿನಾಂಕ:28.08.2007.

**ಪ್ರಸ್ತಾವನೆ:**

ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕು ಶ್ರೀಗೋಡು ಗ್ರಾಮದ ಸರ್ವೆ ನಂ.127ರಲ್ಲಿ ಶ್ರೀ ನವಾಬಸಾಬ ರವರಿಗೆ 2.00 ಎಕರೆಗೆ ದಿನಾಂಕ:06.12.2001 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟಿಸು ಸಂಖ್ಯೆ: ಗಭೂಇ: ಡಿಸಿಬಿ : ಕಗಗು/ 1417–18/ ದಿನಾಂಕ:26.05.2007 ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 06–07 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,31,395/– ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರಿಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ನಿಯಮ 6(1) ಹಾಗೂ ನಿಯಮ 39ರಡಿ ನೋಟೀಸು ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆಯನ್ನು ನಿಷ್ಕ್ರಿಯವಾಗಿರುವುದರಿಂದ ಈ ಬಗ್ಗೆ ಸಮಜಾಯಿಸಿ ಬಂದಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಉಲ್ಲೇಖಿತ ನೋಟಿಸುಗಳಿಗೆ ಗುತ್ತಿಗೆದಾರರು ಯಾವ ರೀತಿಯೂ ಸ್ಪಂದಿಸುತ್ತಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ:02.07.1994 ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 482 ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ: ಗಭೂಇ: ಡಿಸಿಬಿ: ಕಗಗು: 482: 2007–08/ 5931, ದಿನಾಂಕ:9ನೇ ಜನವರಿ, 2008**

ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಡಿಯಲ್ಲಿ ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕು ಶ್ರೀಗೋಡು ಗ್ರಾಮದ ಸರ್ವೆ ನಂ.127ರಲ್ಲಿ 2.00 ಎಕರೆಗೆ ಕಪ್ಪು ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 482 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ.

ಪಿ.ಆರ್.75

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಬೆಂಗಳೂರು ರವರ ನಡವಳಿಗಳು**

**ವಿಷಯ:** ಹಾಸನ ಜಿಲ್ಲೆ ಸಕಲೇಶಪುರ ತಾಲ್ಲೂಕು ಚಿಕ್ಕಕಲ್ಲೂರು ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಮೆ: ಕೆ.ಪಿ. ಅಹಮದ್ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:427ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.14,71,825/– ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಓದಲಾಗಿದೆ:** 1) ಕ.ಉ.ಖ.ರಿ.ನಿ. 94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ನೋಟೀಸ್ ಸಂಖ್ಯೆ: ಗಭೂಇ: ಡಿಸಿಬಿ: ಕಗಗು: 427: 2007–08/ ದಿನಾಂಕ:16.08.2005.

2) ಹಿರಿಯ ಭೂವಿಜ್ಞಾನಿ, ಹಾಸನ ರವರ ಪತ್ರ ಸಂಖ್ಯೆ: 427 ಗಭೂಇ: ಡಿಸಿಬಿ: ಕಗಗು: 3327: 2007–08/ ದಿನಾಂಕ:11.09.2007.

**ಪ್ರಸ್ತಾವನೆ:**

ಹಾಸನ ಜಿಲ್ಲೆ ಸಕಲೇಶಪುರ ತಾಲ್ಲೂಕು ಚಿಕ್ಕಕಲ್ಲೂರು ಗ್ರಾಮದ ಸರ್ವೆ ನಂ.23ರಲ್ಲಿ ಮೆ: ಕೆ.ಪಿ. ಅಹಮದ್ ರವರಿಗೆ 10.00 ಎಕರೆಗೆ ದಿನಾಂಕ:28.03.2001 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟಿಸು ಸಂಖ್ಯೆ: ಗಭೂಇ: ಡಿಸಿಬಿ : ಕಗಗು/ 427/ ದಿನಾಂಕ:16.08.2005 ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 06–07 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.14,71,825/– ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರಿಯವಾಗಿ ಇಟ್ಟ

ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ನಿಯಮ 6(1) ಹಾಗೂ ನಿಯಮ 39ರಡಿ ನೋಟೀಸು ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆಯನ್ನು ನಿಷ್ಕ್ರಿಯವಾಗಿರುವುದರಿಂದ ಈ ಬಗ್ಗೆ ಸಮಜಾಯಿಸಿ ಬಂದಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಉಲ್ಲೇಖಿತ ನೋಟಿಸುಗಳಿಗೆ ಗುತ್ತಿಗೆದಾರರು ಯಾವ ರೀತಿಯೂ ಸ್ಪಂದಿಸುತ್ತಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ:02.07.1994 ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 427 ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ: ಗಭೂಇ: ಡಿಸಿಬಿ: ಕಗಗು: 427: 2007-08/ 5950, ದಿನಾಂಕ:9ನೇ ಜನವರಿ, 2008**

ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಡಿಯಲ್ಲಿ ಹಾಸನ ಜಿಲ್ಲೆ ಸಕಲೇಶಪುರ ತಾಲ್ಲೂಕು ಚಿಕ್ಕಕಲ್ಲೂರು ಗ್ರಾಮದ ಸರ್ವೆ ನಂ.23ರಲ್ಲಿ 10.00 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 427 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ.

ಪಿ.ಆರ್.76

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಬೆಂಗಳೂರು ರವರ ನಡವಳಿಗಳು**

**ವಿಷಯ:** ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕು ರಾಮೇನಹಳ್ಳಿ ಗ್ರಾಮದಲ್ಲಿ ಕಪ್ಪು ಗ್ರಾನೈಟ್‌ಗಾಗಿ ಮೆ: ಎಂಪಿ. ಸುರೇಶ್ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:481ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.64,506/- ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಓದಲಾಗಿದೆ:** 1) ಕ.ಉ.ಖ.ರಿ.ನಿ. 94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ನೋಟೀಸ್ ಸಂಖ್ಯೆ: ಗಭೂಇ: ಡಿಸಿಬಿ: ಕಗಗು: 481:2007-08/1200-20/ ದಿನಾಂಕ:18.05.2007.
2) ಹಿರಿಯ ಭೂವಿಜ್ಞಾನಿ, ಹಾಸನ ರವರ ಪತ್ರ ಸಂಖ್ಯೆ: 2.960 ಗಭೂಇ: ಡಿಸಿಬಿ: ಕಗಗು: 481: 2007-08/ ದಿನಾಂಕ:28.08.2007.

**ಪ್ರಸ್ತಾವನೆ:**

ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕು ರಾಮೇನಹಳ್ಳಿ ಗ್ರಾಮದ ಸರ್ವೆ ನಂ.16ರಲ್ಲಿ ಮೆ: ಎಂ.ಪಿ.ಸುರೇಶ್ ರವರಿಗೆ 1.20 ಎಕರೆಗೆ ದಿನಾಂಕ:05.12.2001 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟಿಸು ಸಂಖ್ಯೆ: ಗಭೂಇ: ಡಿಸಿಬಿ : ಕಗಗು/1200-201/ದಿನಾಂಕ:18.05.2007 ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 06-07 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.64,506/- ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರಿಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ನಿಯಮ 6(1) ಹಾಗೂ ನಿಯಮ 39ರಡಿ ನೋಟೀಸು ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆಯನ್ನು ನಿಷ್ಕ್ರಿಯವಾಗಿರುವುದರಿಂದ ಈ ಬಗ್ಗೆ ಸಮಜಾಯಿಸಿ ಬಂದಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಉಲ್ಲೇಖಿತ ನೋಟಿಸುಗಳಿಗೆ ಗುತ್ತಿಗೆದಾರರು ಯಾವ ರೀತಿಯೂ ಸ್ಪಂದಿಸುತ್ತಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂಆರ್‌ಸಿ 92 ದಿನಾಂಕ:02.07.1994 ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:481 ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ: ಗಭೂಇ: ಡಿಸಿಬಿ: ಕಗಗು: 481: 2007-08/ 5922, ದಿನಾಂಕ:9ನೇ ಜನವರಿ, 2008**

ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಡಿಯಲ್ಲಿ ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕು ರಾಮೇನಹಳ್ಳಿ ಗ್ರಾಮದ ಸರ್ವೆ ನಂ.16 ರಲ್ಲಿ 1.20 ಎಕರೆಗೆ ಕಪ್ಪು ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 481 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ.

ಪಿ.ಆರ್.77

## ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ, ಇವರ ನ್ಯಾಯಾಲಯಲ್ಲಿ
## ಸಂಕೀರ್ಣ ದಾವೆ ಸಂಖ್ಯೆ: 1:92–93

**ಅರ್ಜಿದಾರರು:**

ಕಾರ್ಯದರ್ಶಿ,
ಶಿವಮೊಗ್ಗ ತಾಲ್ಲೂಕು, ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ: ಶಿವಮೊಗ್ಗ.

**ಎದುರು ಅರ್ಜಿದಾರರು:**

1) ಶ್ರೀ ಬಿ.ಎಂ. ಜಯದೇವಯ್ಯ ಬಿನ್ ವಾಮದೇವಯ್ಯ, ಪ್ರಭಾರ ಕಾರ್ಯದರ್ಶಿ, ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ. ಶಿವಮೊಗ್ಗ.
2) ಶ್ರೀ ಹೆಚ್. ಚನ್ನಪ್ಪ ತಂದೆ: ತಿಳಿದಿಲ್ಲ.
ಸೇಲ್ಸ್ ಮನ್ ಕಂ–ಕ್ಲರ್ಕ್ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ: ಶಿವಮೊಗ್ಗ.
3) ಶ್ರೀಮತಿ ನಾಗಮ್ಮ ಕೋಂ ಖಂಡಪ್ಪ ಕೇರ್‌ಆಫ್ ಹೆಚ್.ಚನ್ನಪ್ಪ, ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಶಿವಮೊಗ್ಗ.

**ಪ್ರಸ್ತಾವನೆ:**

ಅರ್ಜಿದಾರ ಸಂಘವು ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ಮೇಲ್ಕಂಡ ದಾವೆಯನ್ನು ಈ ನ್ಯಾಯಾಲಯದಲ್ಲಿ ದಾಖಲಿಸಿರುತ್ತಾರೆ. ಎದುರು ಅರ್ಜಿದಾರರಾದ 1 ಹಾಗೂ 2 ಇವರುಗಳು ಅರ್ಜಿದಾರ ಸಂಘದಲ್ಲಿ ಕಾರ್ಯನಿರ್ವಹಿಸಿದ ಅವಧಿಗೆ ಸಂಬಂಧಿಸಿದ ವಿಚಾರದಲ್ಲಿ ಸದರಿಯವರುಗಳಿಂದ ಬರಬೇಕಾದ ಮೊಬಲಗನ್ನು ವಸೂಲಿ ಕ್ರಮಕ್ಕಾಗಿ ಮೇಲ್ಕಂಡ ದಾವೆಯನ್ನು ಹೂಡಿರುತ್ತಾರೆ.

ಸದರಿ ಮೊಬಲಗನ್ನು ವಸೂಲಾತಿ ಆಗದಿರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ ಮೇಲ್ಕಂಡ ದಾವೆಯಲ್ಲಿ ಎದುರು ಅರ್ಜಿದಾರರುಗಳ ಸ್ಥಿರಾಸ್ತಿಯನ್ನು ದಾವಾ ಅರ್ಜಿಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸುವ ಸಲುವಾಗಿ ಅರ್ಜಿದಾರರು, ಎದುರು ಅರ್ಜಿದಾರರುಗಳ ಹೆಸರಿನಲ್ಲಿರುವ ಈ ಕೆಳಕಂಡ ಸ್ಥಿರಾಸ್ತಿಗಳನ್ನು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರಡಿಯಲ್ಲಿ ಈ ನ್ಯಾಯಾಲಯದಿಂದ ಷರತ್ತು ಪೂರ್ವ ಜಪ್ತು ಆಜ್ಞೆಯನ್ನು ಇದೇ ನ್ಯಾಯಾಲಯದ ಆದೇಶ ಸಂಖ್ಯೆ: ಸಂಕೀರ್ಣ ದಾವೆ ಸಂಖ್ಯೆ: 1:92–93: ದಿನಾಂಕ:03.06.1993ರನ್ವಯ ಸದರಿ ಸ್ಥಿರಾಸ್ತಿಗಳನ್ನು ಸ್ಥಿರೀಕರಣಗೊಳಿಸಿ (ಖಾಯಂಗೊಳಿಸಿ) ಆದೇಶಿಸಲಾಗಿದೆ.

**ಷೆಡ್ಯೂಲ್**

| ಕ್ರ. ಸಂ. | ಸ್ವತ್ತಿನ ವಿವರ | ಖಾತೆದಾರರ ಅನುಭವದಾರರ ಹೆಸರು | ಖಾತೆ ನಂಬರು ಸರ್ವೆ ನಂಬರು | ವಿಸ್ತೀರ್ಣ | |
|---|---|---|---|---|---|
| | | | | ತರಹೆ | ಎಕರೆ:ಕುಂಟೆ |
| 1. | ಬಾಡ ಗ್ರಾಮ ಮಾಯಕೊಂಡ ಹೋಬಳಿ ದಾವಣಗೆರೆ ತಾಲ್ಲೂಕಿನಲ್ಲಿರುವ ಜಮೀನು. | ಶ್ರೀ ಬಿ.ಎಂ. ಜಯ ದೇವಯ್ಯ | ಸರ್ವೆ ನಂ.9 ಖಾತೆ ನಂ.197 | ತರಿ | 6–20 |
| 2. | ಶಿವಮೊಗ್ಗ ನಗರ 7ನೇ ವಿಭಾಗದ ಉಪ್ಪಾರಕೇರಿಯಲ್ಲಿರುವ ಸಾದಾಹೆಂಚಿನ ಕಟ್ಟಡ. | ಶ್ರೀಮತಿ ನಾಗಮ್ಮ ಕೋಂ ಖಂಡಪ್ಪ | ಖಾತೆ ನಂ.650 635, 663, ಹಳೆ ಖಾತೆ ಸಂ.513:493:517 | 11 | 115 |

ಮೇಲ್ಕಂಡ ದಾವೆಯಲ್ಲಿನ ಅರ್ಜಿದಾರರಾದ ಶಿವಮೊಗ್ಗ ತಾಲ್ಲೂಕ್ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ: ಶಿವಮೊಗ್ಗ, ಇದರ ಕಾರ್ಯದರ್ಶಿಯವರ ಪತ್ರಸಂಖ್ಯೆ:73:2007–08: ದಿನಾಂಕ:04.11.2007ರಲ್ಲಿ ಇ.ಪಿ.ಸಂ.312: 1996–97 ಹಾಗೂ 819: 1998–99 ಗಳಿಗೆ ಸಂಬಂಧಪಟ್ಟಂತೆ ಕ್ರಮವಾಗಿ ರೂ.10,420–00 ಹಾಗೂ ರೂ.45866–00ಗಳು ಬಡ್ಡಿಸಹಿತ ಸಂಪೂರ್ಣವಾಗಿ ಹಣ ಸಂಘಕ್ಕೆ ಜಮಾ ಆಗಿರುತ್ತದೆ ಎಂದು ತಿಳಿಸಿರುತ್ತಾರೆ. ಹಾಗೂ ಈ ಹಿನ್ನೆಲೆಯಲ್ಲಿ ಈ ನ್ಯಾಯಾಲಯ ಆದೇಶ ಸಂ. ಸಂಕೀರ್ಣ ದಾವೆ ಸಂಖ್ಯೆ:1:92–93, ದಿನಾಂಕ:03.06.1993 ರಲ್ಲಿ ಸಹಕಾರ ಕಾಯ್ದೆ 1959ರ ಕಲಂ 103 ರಡಿಯಲ್ಲಿ ಹೊರಡಿಸಿರುವ ಜಪ್ತು ಆಜ್ಞೆಯನ್ನು ತೆರವುಗೊಳಿಸಲು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ, ಮೇಲ್ಕಂಡ ದಾವೆಯ ಅರ್ಜಿದಾರ ಸಂಘದ ಕಾರ್ಯದರ್ಶಿಯವರ ಪತ್ರ ದಿನಾಂಕ:04.11.2007 ಮತ್ತು ಸಂಬಂಧಪಟ್ಟ ಒದಗಿಸಿದ ದಾಖಲೆಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು ಈ ನ್ಯಾಯಾಲಯದ ಆದೇಶ ಸಂಖ್ಯೆ: ಸಂಕೀರ್ಣ ದಾವೆ ಸಂಖ್ಯೆ:1: 92–93: ದಿನಾಂಕ:03.06.1993 ರಂತೆ ಸಹಕಾರ ಸಂಘಗಳ ಕಾಯ್ದೆ ಕಲಂ 103ರಡಿಯಲ್ಲಿ ಹೊರಡಿಸಿದ ಷರತ್ತು ಪೂರ್ವಕ ಜಪ್ತು ಆಜ್ಞೆಯ ಸ್ಥಿರೀಕರಣ ಆದೇಶದಲ್ಲಿನ ಷೆಡ್ಯೂಲ್‌ನ ಕ್ರಮ ಸಂಖ್ಯೆ:1 ರಲ್ಲಿನ ಶ್ರೀ ಬಿ.ಎಂ. ಜಯದೇವಯ್ಯ, ಇವರಿಗೆ ಸೇರಿದ ಸರ್ವೆ ನಂ.9ರ ಖಾತೆ ಸಂಖ್ಯೆ:197 ರಲ್ಲಿನ ಸ್ಥಿರಾಸ್ತಿಯನ್ನು ಸದರಿ ಆದೇಶದ ಪ್ರತಿಬಂಧಕಾಜ್ಞೆಯಿಂದ ತೆರವುಗೊಳಿಸಿ ಆದೇಶಿಸಿದೆ. ಹಾಗೂ ಸದರಿ ಷೆಡ್ಯೂಲ್‌ನ ಕ್ರ.ಸಂ.2ರಲ್ಲಿ ಶ್ರೀಮತಿ ನಾಗಮ್ಮ ಕೋಂ ಖಂಡಪ್ಪ, ಇವರಿಗೆ ಸೇರಿದ ಖಾತೆ ಸಂಖ್ಯೆ: 650, 635 ಹಾಗೂ 663 (ಹಳೆ ಖಾತೆ ಸಂ:513:493:517) ರಲ್ಲಿನ ಸ್ಥಿರಾಸ್ತಿಯನ್ನು ಷರತ್ತು ಪೂರ್ವಕ ಜಪ್ತು ಆಜ್ಞೆಯ ಸ್ಥಿರೀಕರಣ ಆದೇಶವನ್ನು ಮುಂದುವರೆಸಿ ಆದೇಶಿಸಿದೆ.

ಈ ಆದೇಶವನ್ನು ಈ ದಿನಾಂಕ 8ನೇ ಜನವರಿ 2008ರಂದು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಆದೇಶಿಸಿದೆ.

**ಸಿ.ಎನ್. ದೇವರಾಜ್**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.90

**ಸಹಕಾರ ಸಂಘಗಳ ಉಪ–ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ವಿಷಯ:** ಸ್ಥಗಿತಗೊಂಡಿರುವ ಅಕ್ಷಯ ಅರ್ಬನ್ ಕ್ರೆಡಿಟ್ ಕೋ–ಆಪರೇಟೀವ್ ಸೊಸೈಟಿ ಲಿ: ಅನವಟ್ಟಿ, ಸೊರಬ ತಾಲ್ಲೂಕ್, ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ, ಇವರ ಪತ್ರ ನಂ. ಎಆರ್–25: ಸಮಾಪನೆ: ಸಿಆರ್–50: 07–08: ದಿನಾಂಕ:24.08.2007.

2) ಈ ಕಛೇರಿಯಿಂದ ಸಂಘದ ಆಡಳಿತ ಮಂಡಳಿಗೆ ಕಳುಹಿಸಿರುವ ನೋಟೀಸ್ ಸಂಖ್ಯೆ: ಡಿಆರ್‌ಎಸ್: ಡಿಎಲ್‌ಎಸ್: 171: 07–08: ದಿನಾಂಕ:12.09.2007.

**ಪ್ರಸ್ತಾವನೆ:**

ಅಕ್ಷಯ ಅರ್ಬನ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ: ಈ ಸಂಘವು ಕ್ರ.ಸಂ. ಎಆರ್‌ಎಸ್: 25436: 1999–2000, ದಿನಾಂಕ:17.05.1999 ರಂದು ನೊಂದಣಿಯಾಗಿರುತ್ತದೆ. ಸಂಘವು ನೊಂದಣಿಯಾದಂದಿನಿಂದಲೂ ಲೆಕ್ಕಪರಿಶೋಧನೆಯಾಗಿರುವುದಿಲ್ಲ. ಆಡಳಿತ ಮಂಡಳಿ ಸಭೆಗಳನ್ನು ಸಮರ್ಪಕವಾಗಿ ನಡೆಸಿರುವುದಿಲ್ಲ. ಸಂಘದ ಲೆಕ್ಕಪತ್ರಗಳನ್ನು ಸಮರ್ಪಕವಾಗಿ ನಡೆಸಿರುವುದಿಲ್ಲ. ಸಂಘದ ಆಡಳಿತ ಮಂಡಳಿ ಸದಸ್ಯರುಗಳು ಸಂಘದ ಸಾಲ ವಸೂಲಾತಿ ಮತ್ತು ಠೇವಣಿ ಸಂಗ್ರಹಣೆ ಮರುಪಾವತಿ ಬಗ್ಗೆ ಕ್ರಮಕೈಗೊಂಡಿರುವುದಿಲ್ಲ. ಸಂಘದ ಸಿಬ್ಬಂದಿಯವರ ವೃಂದಬಲ ಹಾಗೂ ವೇತನ ಶ್ರೇಣಿಯನ್ನು ಇಲಾಖಾಧಿಕಾರಿಗಳಿಂದ ಮಂಜೂರಾತಿ ಪಡೆದಿರುವುದಿಲ್ಲ. ಇದರಿಂದ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಸಂಘವನ್ನು ಮುಂದುವರೆಸಿಕೊಂಡು ಅಭಿವೃದ್ಧಿಗೊಳಿಸುವ ಆಸಕ್ತಿಯು ಕಂಡುಬರುತ್ತಿಲ್ಲವಾದ ಕಾರಣ, ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂಬ ಅಭಿಪ್ರಾಯದೊಂದಿಗೆ ಉಲ್ಲೇಖ (1)ರಲ್ಲಿ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಇವರು ಪ್ರಸ್ತಾವನೆಯನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ.

ಉಲ್ಲೇಖ (2)ರ ಈ ಕಛೇರಿಯ ಪತ್ರದಲ್ಲಿ ಸಂಘವನ್ನು ಮೇಲ್ಕಂಡ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 72(2) ರನ್ವಯ ಸಂಘದ ಅಧ್ಯಕ್ಷರು ಹಾಗೂ ಆಡಳಿತ ಮಂಡಳಿಯವರಿಗೆ ನೋಟಿಸ್ ನೀಡಲಾಗಿರುತ್ತದೆ. ಸದರಿಯವರಿಂದ ಇದುವರೆಗೂ ಪ್ರತಿಕ್ರಿಯೆ ಬಾರದೆ ಇರುವುದರಿಂದ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಸಾಗರ, ಇವರ ಶಿಫಾರಸ್ಸಿನ ಆಧಾರಿತವಾಗಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂಬ ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ನಂ.ಡಿಆರ್‌ಎಸ್: ಸಮಾಪನೆ: 171:07–08, ದಿನಾಂಕ:5ನೇ ನವೆಂಬರ್, 2007**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ–ನಿಬಂಧಕರಾದ ಸಿ.ಎನ್.ದೇವರಾಜ್, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್ಎಂ: 2001: ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ ಅಕ್ಷಯ ಅರ್ಬನ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ: ಆನವಟ್ಟಿ, ಸೊರಬ ತಾಲ್ಲೂಕು, ಈ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿರುತ್ತೇನೆ. ಸಹಕಾರ ಕಾಯ್ದೆ ಕಲಂ 73ರಲ್ಲಿ ದತ್ತವಾದ ಅಧಿಕಾರದನ್ವಯ ಸಹಕಾರ ಅಭಿವೃದ್ಧಿ

ಅಧಿಕಾರಿ, ಸೊರಬ ತಾಲ್ಲೂಕು, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿದೆ. ಸದರಿಯವರು ಆದೇಶದ 30 ದಿನಗಳೊಳಗಾಗಿ ಸಮಾಪನಾ ಕಾರ್ಯವನ್ನು ನಿರ್ವಹಿಸಲು ಸೂಚಿಸಿದೆ.

ಈ ಆದೇಶವನ್ನು ದಿನಾಂಕ:5ನೇ ನವೆಂಬರ್ 2007ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

**ಸಿ.ಎನ್. ದೇವರಾಜ್**

ಪಿ.ಆರ್.91

ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಸಹಕಾರ ಸಂಘಗಳ ಉಪ–ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ವಿಷಯ:** ಸ್ಥಗಿತಗೊಂಡಿರುವ ಮೀನುಗಾರರ ಸಹಕಾರ ಸಂಘ ನಿ., ಸೊರಬ ಇದನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನಾ ಆದೇಶ ನಂ.ಡಿಆರ್ಎಸ್: ಸಮಾಪನೆ: ಡಿಎಲ್ಎಸ್:117: 2006–07: ದಿನಾಂಕ:20.07.2006.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಇವರ ಪ್ರಸ್ತಾವನೆ ಸಂ. ಸನಿ25: ಸಮಾಪನೆ: ಸಿಆರ್–77: 2006–07: ದಿನಾಂಕ:24.09.2007.

**ಪ್ರಸ್ತಾವನೆ:**

ಮೀನುಗಾರರ ಸಹಕಾರ ಸಂಘ ನಿ. ಸೊರಬ, ಇದನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಸಾಗರ, ಇವರ ಕಾರ್ಯಾಲಯದಲ್ಲಿ ಕ್ರ.ಸಂ. ಸನಿ–25: ನೊಂದಣಿ:1119:1956: ದಿನಾಂಕ:18.01.1956 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿ ಹೊಂದಿರುತ್ತದೆ. ಸಂಘವು ಬೈಲಾದಲ್ಲಿನ ಉದ್ದೇಶಗಳಂತೆ ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದ ಕಾರಣ, ಈ ಕಛೇರಿಯ ಉಲ್ಲೇಖ (1)ರನ್ವಯ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಸೊರಬ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿರುತ್ತದೆ. ಅದರಂತೆ ಸಹಕಾರ ಅಭಿವೃದ್ಧಿ ಅಧಿಕಾರಿ, ಸೊರಬ, ಇವರು ಸಂಘದ ಸಮಾಪನಾಧಿಕಾರಿಯಾಗಿ ದಿನಾಂಕ:15.09.2006ರಂದು ಪ್ರಭಾರ ಪಡೆದುಕೊಂಡು ಕಾರ್ಯನಿರ್ವಹಿಸುತ್ತಿರುತ್ತಾರೆ.

ಈ ಮಧ್ಯೆ ಸಂಘದ ಸದಸ್ಯರು, ಸಹಾಯಕ ನಿಬಂಧಕರು, ಸಾಗರ ಇವರಿಗೆ ದಿನಾಂಕ:18.09.2006 ರಂದು ಸಂಘವನ್ನು ಪುನಃಶ್ಚೇತನಗೊಳಿಸುವಂತೆ ಕೋರುತ್ತಾ, ಸಹಕಾರ ಅಭಿವೃದ್ಧಿ ಅಧಿಕಾರಿ, ಸೊರಬ, ಇವರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ಸದರಿ ಅರ್ಜಿಯಲ್ಲಿ, ಸಂಘದಲ್ಲಿ ಸುಮಾರು 250 ಜನ ಸದಸ್ಯರಿದ್ದು, ಇವರೆಲ್ಲಾ ಮೀನು ಕೃಷಿಯನ್ನೇ ಅವಲಂಬಿಸಿರುವುದರಿಂದ, ಸಂಘವನ್ನು ರದ್ದುಪಡಿಸಿದಲ್ಲಿ ತೊಂದರೆಯಾಗುತ್ತದೆಯಾದ ಕಾರಣ ಪುನಃಶ್ಚೇತನಗೊಳಿಸಿ ಎಂಬುದಾಗಿ ಕೋರಿಕೊಂಡಿರುತ್ತಾರೆ.

ಈ ಸಂಘದ ಸದಸ್ಯರ ಮನವಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ, ಶಿವಮೊಗ್ಗ, ಇವರ ಶಿಫಾರಸ್ಸು ಪತ್ರ, ಇವುಗಳ ಆಧಾರಿತವಾಗಿ ಈ ಸಂಘವನ್ನು ಪುನಃಶ್ಚೇತನಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

### ಆದೇಶ

**ಕ್ರ: ಸಂ: ಡಿಆರ್ಎಸ್: ಸಮಾಪನೆ: ಡಿಎಲ್ಎಸ್:190:2007–08/ 1345, ದಿನಾಂಕ:24ನೇ ಅಕ್ಟೋಬರ್, 2007**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ–ನಿಬಂಧಕರಾದ ಸಿ.ಎನ್.ದೇವರಾಜ್, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್ಎಂ: 2001: ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ಮೀನುಗಾರರ ಸಹಕಾರ ಸಂಘ ನಿ. ಸೊರಬ, ಇವರ ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಪಡಿಸಿ, ಈ ಕೆಳಕಂಡ ಷರತ್ತು ಪೂರಕವಾಗಿ ಪುನಃಶ್ಚೇತನಗೊಳಿಸಿ ಆದೇಶಿಸಿದೆ.

**ಷರತ್ತುಗಳು:**

1) ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಾವಳಿ ಪ್ರಕಾರ ಇತ್ತೀಚಿನ ತಿದ್ದುಪಡಿ ಆಧಾರಿತವಾಗಿ ಬೈಲಾ ತಿದ್ದುಪಡಿ ಮಾಡಿಕೊಂಡು ಅನುಮೋದನೆ ಪಡೆಯತಕ್ಕದ್ದು.

2) ಸಮಾಪನಾ ಆಡಳಿತ ಪೂರ್ವದಲ್ಲಿ ಈ ಸಂಘದ ಕಾರ್ಯವ್ಯಾಪ್ತಿಯಂತೆ ಕಾರ್ಯ ನಿರ್ವಹಿಸತಕ್ಕದ್ದು. ಈ ಸಂಘದ ಕಾರ್ಯವ್ಯಾಪ್ತಿ ಬೇರೆ ಸಂಘಕ್ಕೂ ಸೇರ್ಪಡೆಯಾಗಿದ್ದಲ್ಲಿ ಆ ಸಂಘದವರು ಆ ಕಾರ್ಯವ್ಯಾಪ್ತಿಯನ್ನು ಬಿಟ್ಟುಕೊಡತಕ್ಕದ್ದು. ಹಾಗೂ ಆಸ್ತಿ ಜವಾಬ್ದಾರಿಯನ್ನು ವರ್ಗಾಯಿಸತಕ್ಕದ್ದು.

3) ಸದಸ್ಯತ್ವ 3 ವರ್ಷಗಳೊಳಗಾಗಿ ಹೆಚ್ಚಿಸಿ ಠೇವಣಾತಿ ಸಂಗ್ರಹಿಸಿ ಸಂಘದ ದುಡಿಯುವ ಬಂಡವಾಳ ಹೆಚ್ಚಿಸಿಕೊಳ್ಳತಕ್ಕದ್ದು.

4) ಮೀನುಮರಿ ಉತ್ಪಾದನಾ ಸಾಮರ್ಥ್ಯಕ್ಕೆ ಹೆಚ್ಚಿಸಿಕೊಳ್ಳುವುದು.

5) ಸಂಘದ ಸಮಾಪನಾಧಿಕಾರಿಯಾದ ಸಹಕಾರ ಅಭಿವೃದ್ಧಿ ಅಧಿಕಾರಿ, ಸೊರಬ, ಇವರು ಎರಡು ತಿಂಗಳೊಳಗಾಗಿ ಆಡಳಿತ ಮಂಡಳಿ ರಚನೆಗಾಗಿ ಸಂಬಂಧಿಸಿದ ಅಧಿಕಾರಿಯವರಿಂದ ಚುನಾವಣಾಧಿಕಾರಿ ನೇಮಕಾತಿ ಪಡೆದು ಸರ್ವಸದಸ್ಯರ ಸಭೆ ಕರೆದು ಪ್ರಭಾರ ವಹಿಸಿಕೊಡಲು ಆದೇಶಿಸಿದೆ.

ಈ ಆದೇಶವನ್ನು ಈ ಕಛೇರಿಯ ಮೊಹರು ಹಾಗೂ ನನ್ನ ಸ್ವಸಹಿಯೊಂದಿಗೆ ಈ ದಿನ ಅಂದರೆ ದಿನಾಂಕ:24ನೇ ಅಕ್ಟೋಬರ್ 2007ರಂದು ಹೊರಡಿಸಿದೆ.

**ಸಿ.ಎನ್. ದೇವರಾಜ್**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.92

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ವಿಷಯ:** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮುಟ್ಟುಗುಪ್ಪೆ ಸೊರಬ ತಾಲ್ಲೂಕು ಇದನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನಾ ಆದೇಶ ನಂ.ಡಿಆರ್‌ಎಸ್: ಎಲ್‌ಕ್ಯೂಡಿ: ಡಿಎಲ್‌ಎಸ್: 1932: 2007–08, ದಿನಾಂಕ:23.06.2007.

2) ಸ.ಸಂ.ಗಳ ಸ.ನಿ. ಸಾಗರ ಉ.ವಿ. ಸಾಗರ, ಇವರ ಪತ್ರ ಸಂಖ್ಯೆ: ಎಆರ್–25: ಸಮಾಪನೆ: ಸಿಆರ್.95: 2007–08, ದಿನಾಂಕ:07.12.2007.

**ಪ್ರಸ್ತಾವನೆ:**

ಹಾಲು ಉತ್ಪಾದಕರ ಸಹಕಾರ ಸಂಘ ನಿ. ಮುಟುಗುಪ್ಪಾ, ಸೊರಬ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಇವರ ಕಛೇರಿಯಲ್ಲಿ ಸಂಖ್ಯೆ: ಎಆರ್–25: ಎಆರ್‌ಎಸ್: 524: ಎಆರ್: 18522: 90–91: ದಿನಾಂಕ:31.03.1991 ರಲ್ಲಿ ನೊಂದಣಿಯಾಗಿದ್ದು, ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿಯನ್ನು ಹೊಂದಿರುತ್ತದೆ. ಸಂಘವು ಸಮರ್ಪಕವಾಗಿ ಕಾರ್ಯನಿರ್ವಹಿಸದಿದ್ದ ಕಾರಣ ಉಲ್ಲೇಖ (1)ರಂತೆ ಈ ಕಛೇರಿಯಿಂದ ಸಮಾಪನೆಗೊಳಿಸಿ ಸಮಾಪನಾಧಿಕಾರಿಯವರನ್ನು ನೇಮಕ ಮಾಡಲಾಗಿರುತ್ತದೆ. ಸದರಿಯವರು ಸಂಘದ ಪ್ರಭಾರ ವಹಿಸಿಕೊಂಡು ಕಾರ್ಯನಿರ್ವಹಿಸುತ್ತಿರುತ್ತಾರೆ. ಈ ಮಧ್ಯೆ ಸಂಘದ ಸದಸ್ಯರು ಮತ್ತು ಗ್ರಾಮಸ್ಥರು ಪುನಃಶ್ಚೇತನಗೊಳಿಸಲು ದಿನಾಂಕ:24.11.2007ರಂದು ಸಹಾಯಕ ನಿಬಂಧಕರು ಸಾಗರ ಉಪ–ವಿಭಾಗ ಇವರಿಗೆ ಮನವಿ ಸಲ್ಲಿಸಿರುತ್ತಾರೆ. ಸದರಿಯವರ ಮನವಿಯಂತೆ ಸಮಾಪನಾಧಿಕಾರಿಯವರು ಸಂಘವನ್ನು ಪುನಃಶ್ಚೇತನಗೊಳಿಸಲು ತೀರ್ಮಾನಿಸಿ ಈ ಸಂಬಂಧ ಸಮಾಪನಾಧಿಕಾರಿ ದಿನಾಂಕ:26.11.2007ರಂದು ಸಭೆ ನಡೆಸಿ ನಿರ್ಣಯವನ್ನು ಕೈಗೊಂಡು ಇಲಾಖೆಗೆ ಶಿಫಾರಸ್ಸು ಮಾಡಲು ತೀರ್ಮಾನಿಸಿರುತ್ತಾರೆ.

ಅದರಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಇವರು ಉಲ್ಲೇಖ (2)ರ ಪತ್ರದಲ್ಲಿ ಸಂಘದ ಸಮಾಪನಾಧಿಕಾರಿಯವರ ಕೋರಿಕೆಯನ್ನು ಪರಿಗಣಿಸಿ ಸಂಘವನ್ನು ಪುನಃಶ್ಚೇತನಗೊಳಿಸಿ ಉತ್ತಮವಾಗಿ ನಡೆಸಿಕೊಂಡು ಹೋಗಲು ಒಂದು ಅವಕಾಶವನ್ನು ಸಂಘದ ಸದಸ್ಯರುಗಳಿಗೆ ಮತ್ತು ಗ್ರಾಮಸ್ಥರಿಗೆ ಕಲ್ಪಿಸಿಕೊಂಡು ಶಿಫಾರಸ್ಸು ಮಾಡಿರುತ್ತಾರೆ.

ಈ ಸಂಘದ ಸದಸ್ಯರು ಮತ್ತು ಗ್ರಾಮಸ್ಥರ ಮನವಿ ಪತ್ರ ಸಮಾಪನಾಧಿಕಾರಿಗಳ ಅಡವಳಿ ಪ್ರತಿ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಇವರ ಶಿಫಾರಸ್ಸು ಆಧಾರಿತವಾಗಿ ಈ ಸಂಘವನ್ನು ಪುನಃಶ್ಚೇತನಗೊಳಿಸುವುದು ಸೂಕ್ತವೆಂಬ ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಕ್ರ: ಸಂ: ಡಿಆರ್‌ಎಸ್: ಎಲ್‌ಕ್ಯೂಡಿ: ಡಿಎಲ್‌ಎಸ್: 1932: 2007–08/1564, ದಿನಾಂಕ:26ನೇ ಡಿಸೆಂಬರ್, 2007**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ–ನಿಬಂಧಕರಾದ ಸಿ.ಎನ್.ದೇವರಾಜ್, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1957ರ ಕಲಂ 72(3)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್ಎಂ: 1001: ದಿನಾಂಕ:21.11.2001 ರಲ್ಲಿ ದತ್ತವಾದ ಅಧಿಕಾರದನ್ವಯ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಮುಟುಗುಪ್ಪೆ, ಸೊರಬ ತಾಲ್ಲೂಕು ಇದರ ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಪಡಿಸಿ, ಈ ಕೆಳಕಂಡ ಷರತ್ತು ಪೂರಕವಾಗಿ ಪುನಃಶ್ಚೇತನಗೊಳಿಸಿ ಆದೇಶಿಸಿದೆ.

**ಷರತ್ತುಗಳು:**

1) ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಾವಳಿ ಪ್ರಕಾರ ಇತ್ತೀಚಿನ ತಿದ್ದುಪಡಿ ಮಾಡಿಕೊಂಡು ಅನುಮೋದನೆ ಪಡೆಯತಕ್ಕದ್ದು.

2) ಸಮಾಪನಾ ಆಡಳಿತ ಪೂರ್ವದಲ್ಲಿ ಈ ಸಂಘದ ಕಾರ್ಯವ್ಯಾಪ್ತಿಯಂತೆ ಕಾರ್ಯ ನಿರ್ವಹಿಸತಕ್ಕದ್ದು. ಈ ಸಂಘದ ಕಾರ್ಯವ್ಯಾಪ್ತಿಯು ಬೇರೆ ಸಂಘಕ್ಕೂ ಸೇರ್ಪಡೆಯಾಗಿದ್ದಲ್ಲಿ ಆ ಸಂಘದವರು ಆ ಕಾರ್ಯವ್ಯಾಪ್ತಿಯನ್ನು ಬಿಟ್ಟುಕೊಡತಕ್ಕದ್ದು ಹಾಗೂ ಆಸ್ತಿ ಜವಾಬ್ದಾರಿಯನ್ನು ವರ್ಗಾಯಿಸತಕ್ಕದ್ದು.

3) ಸದಸ್ಯತ್ವ ಹೆಚ್ಚಿಸಿ ಶೇವಣಾತಿ ಸಂಗ್ರಹಿಸಿ ಸಂಘದ ದುಡಿಯುವ ಬಂಡವಾಳ ಹೆಚ್ಚಿಸಿಕೊಳ್ಳತಕ್ಕದ್ದು.

4) ಸಂಘದ ಸಮಾಪನಾಧಿಕಾರಿಯಾದ ಸಹಕಾರ ಅಭಿವೃದ್ಧಿ ಅಧಿಕಾರಿ, ಸೊರಬ, ಇವರು ಎರಡು ತಿಂಗಳೊಳಗಾಗಿ ಆಡಳಿತ ಮಂಡಳಿ ರಚನೆಗಾಗಿ ಸಂಬಂಧಿಸಿದ ಅಧಿಕಾರಿಯವರಿಂದ ಚುನಾವಣಾಧಿಕಾರಿಯಾಗಿ ನೇಮಕಾತಿ ಪಡೆದು ಸರ್ವಸದಸ್ಯರ ಸಭೆ ಕರೆದು ಪ್ರಭಾರ ವಹಿಸಿಕೊಡಲು ಆದೇಶಿಸಿದೆ.

ಈ ಆದೇಶವನ್ನು ಈ ಕಛೇರಿಯ ಮೊಹರು ಹಾಗೂ ನನ್ನ ಸ್ವಸಹಿಯೊಂದಿಗೆ ಈ ದಿನ ಅಂದರೆ ದಿನಾಂಕ:26ನೇ ಡಿಸೆಂಬರ್ 2007ರಂದು ಹೊರಡಿಸಿದೆ.

**ಸಿ.ಎನ್. ದೇವರಾಜ್**
ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.93

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ವಿಷಯ:** ನಿಷ್ಕ್ರಿಯಗೊಂಡಿರುವ ಶ್ರೀ ಮಾರುತಿ ಕೈಮಗ್ಗ ನೇಕಾರರ ಉತ್ಪತ್ತಿ ಮತ್ತು ಮಾರಾಟ ಸಹಕಾರ ಸಂಘ ನಿ: ಉದ್ರಿ, ಸೊರಬ ತಾಲ್ಲೂಕು ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ-ವಿಭಾಗ, ಸಾಗರ ಇವರ ಪತ್ರ ಸಂಖ್ಯೆ: ಎಆರ್-25: ಸಮಾಪನೆ: ಸಿಆರ್-87: 07-08: ದಿನಾಂಕ:17.10.2007.

**ಪ್ರಸ್ತಾವನೆ:**

ಶ್ರೀ ಮಾರುತಿ ಕೈಮಗ್ಗ ನೇಕಾರರ ಉತ್ಪತ್ತಿ ಮತ್ತು ಮಾರಾಟ ಸಹಕಾರ ಸಂಘ ನಿ: ಉದ್ರಿ, ಸೊರಬ ತಾಲ್ಲೂಕು, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ-ವಿಭಾಗ, ಇವರ ಕಾರ್ಯಾಲಯದಲ್ಲಿ ನೊಂದಣಿ ಸಂಖ್ಯೆ: ಎಆರ್ಎಸ್-25: ನೊಂದಣಿ: ಸಿಆರ್-152: 29560: 2001-02 ರಲ್ಲಿ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇರುತ್ತದೆ. ಸಂಘವು ನೊಂದಣಿಯಾದಂದಿನಿಂದಲೂ ಲೆಕ್ಕ ಪರಿಶೋಧನೆಯಾಗಿರುವುದಿಲ್ಲ. ಪ್ರತಿ ತಿಂಗಳು ನಡೆಸಬೇಕಾದ ಆಡಳಿತ ಮಂಡಳಿ ಸಭೆಗಳನ್ನು ನಡೆಸಿರುವುದಿಲ್ಲ. ಸಂಘದಲ್ಲಿ ಲೆಕ್ಕಪತ್ರಗಳನ್ನು ಸಮರ್ಪಕವಾಗಿ ನಿರ್ವಹಿಸಿರುವುದಿಲ್ಲ. ಬೈಲಾದ ಉದ್ದೇಶದಂತೆ ಕಾರ್ಯನಿರ್ವಹಿಸುತ್ತಿರುವುದಿಲ್ಲ. ಚುನಾವಣೆ ನಡೆಸಲು ಆದೇಶವಾಗಿದ್ದೂ ಸಹ ಚುನಾವಣೆ ನಡೆಸಿರುವುದಿಲ್ಲ. ಸಿಬ್ಬಂದಿಯವರ ವೃಂದಬಲ ಮತ್ತು ವೇತನಶ್ರೇಣಿಯನ್ನು ಇಲಾಖೆಯಿಂದ ಮಂಜೂರು ಮಾಡಿಸಿಕೊಂಡಿರುವುದಿಲ್ಲ ಎಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ-ವಿಭಾಗ, ಇವರು ಉಲ್ಲೇಖಿತದ ಪತ್ರದಲ್ಲಿ ವರದಿ ಮಾಡುತ್ತಾ ಈ ಮೇಲ್ಕಂಡ ಕಾರಣಗಳಿಂದಾಗಿ ಸಂಘದ ಆಡಳಿತ ಮಂಡಳಿ ಸದಸ್ಯರುಗಳಿಗೆ ಸಂಘವನ್ನು ಮುಂದುವರೆಸಿಕೊಂಡು ಹೋಗುವ ಬಗ್ಗೆ ಯಾವುದೇ ಆಸಕ್ತಿ ಇರುವುದಿಲ್ಲವಾದ ಕಾರಣ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತ ಎಂದು ಶಿಫಾರಸ್ಸು ಮಾಡಿರುತ್ತಾರೆ.

ಸದರಿಯವರ ಶಿಫಾರಸ್ಸಿನ ಆಧಾರದನ್ವಯ ಈ ಸಂಘವು ಸ್ಥಗಿತಗೊಂಡಿದೆ ಎಂದು ಅಭಿಪ್ರಾಯಪಟ್ಟು ಇದನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

**ಕ್ರ: ಸಂ: ಡಿಆರ್ಎಸ್: ಸಮಾಪನೆ: ಡಿಎಲ್ಎಸ್:215: 2007-08/ 1530, ದಿನಾಂಕ:26ನೇ ಡಿಸೆಂಬರ್, 2007**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರಾದ ಸಿ.ಎನ್.ದೇವರಾಜ್, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:ಸಿಎಲ್ಎಂ:200: ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಂದಾಗಿ ಶ್ರೀ ಮಾರುತಿ ಕೈಮಗ್ಗ ನೇಕಾರರ ಉತ್ಪತ್ತಿ ಮತ್ತು ಮಾರಾಟ ಸಹಕಾರ ಸಂಘ ನಿ: ಉದ್ರಿ, ಸೊರಬ ತಾಲ್ಲೂಕು, ಇದನ್ನು ಸಮಾಪನೆಗೊಳಿಸಿ ಆದೇಶಿಸಿರುತ್ತೇನೆ.

ಸಹಕಾರ ಕಾಯ್ದೆ ಕಲಂ 73ರಲ್ಲಿ ದತ್ತವಾದ ಅಧಿಕಾರದನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಸೊರಬ ತಾಲ್ಲೂಕು, ಇವರನ್ನು ಸಮಾಪನಾಧಿಕಾರಿಯಾಗಿ ನೇಮಕಗೊಳಿಸಿದ್ದು, ಸದರಿಯವರು ಈ ಆದೇಶದ 30 ದಿನಗಳೊಳಗಾಗಿ ಸಮಾಪನಾ ಕಾರ್ಯವನ್ನು ನಿರ್ವಹಿಸಲು ಸೂಚಿಸಿದೆ.

ಈ ಆದೇಶವನ್ನು ದಿನಾಂಕ:26ನೇ ಡಿಸೆಂಬರ್, 2007ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.94

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**

**ಸಂಖ್ಯೆ: ಡಬ್ಲ್ಯೂಸಿಎ: ಇತರೆ–2/ 08, ದಿನಾಂಕ:7ನೇ ಜನವರಿ, 2008**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| (1) ಈರಪ್ಪ ಬಿನ್ ಅಡೆವೆಪ್ಪ,<br>(2) ಫಕೀರಮ್ಮ ಕೋಂ ಈರಪ್ಪ<br>(3) ಗೋಪಾಲ ಬಿನ್ ಈರಪ್ಪ, ಮತ್ತೋಡು ಗ್ರಾಮ, ಶಿವಮೊಗ್ಗ ತಾ: | | 1) ವಿ. ಗೋವಿಂದ ಬಿನ್ ವೆಂಕಟೇಶ್, ಅಬ್ಬಲಗೆರೆ ಗ್ರಾಮ, ಶಿವಮೊಗ್ಗ ತಾ:<br>2) ವ್ಯವಸ್ಥಾಪಕರು, ಇಸ್ಕೋ ಟೋಕಿಯೋ ಇನ್ಸೂರೆನ್ಸ್ ಸರ್ವಿಸಸ್, 3ನೇ ಮಹಡಿ, ಎಂ.ಜಿ. ರಸ್ತೆ, ಬೆಂಗಳೂರು. |

**ಅಧಿಸೂಚನೆ**

ಅರ್ಜಿದಾರರಾದ ಈರಪ್ಪ ಮತ್ತು ಇತರರು ಇವರು ದಿ: ಮಂಜುನಾಥ 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:22.10.2007ರಂದು ಸಂಭವಿಸಿದ ಅಪಘಾತದಲ್ಲಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ
ಆಯುಕ್ತರ ನ್ಯಾಯಾಲಯ, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**

**ಸಂಖ್ಯೆ: ಡಬ್ಲ್ಯೂಸಿಎ: ಸಿಆರ್–3/ 08, ದಿನಾಂಕ:7ನೇ ಜನವರಿ, 2008**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಮಂಜುಳಾ ಕೊಂ ದಿ: ಮೈಲಾರಿರಾವ್<br>2) ಅರುಣ್ ಕುಮಾರ್ ಬಿನ್ ಮೈಲಾರಿ ರಾವ್, ಸಿದ್ಧೇಶ್ವರ ನಗರ, ಚಿಕ್ಕಲ್, ಶಿವಮೊಗ್ಗ. | | 1) ಸರಳ ಹೆಚ್. ಕೋಂ ಕರಿಬಸಪ್ಪ, ತೀರ್ಥಲಿಂಗೇಶ್ವರ ಮಹಿಳಾ ಸಮಾಜ, 60 ಅಡಿ ರಸ್ತೆ, 2ನೇ ತಿರುವು, ವಿನೋಬನಗರ, ಶಿವಮೊಗ್ಗ.<br>2) ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ದ್ವಾರಕಾ, 2ನೇ ಮಹಡಿ, ಉತ್ತಮರ್ ಗಾಂಧಿ ಸೆಲೈ, ಚೆನ್ನೈ, ಶಿವಮೊಗ್ಗ ತಾ:<br>3) ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಗಾರ್ಡನ್ ಏರಿಯಾ, ಶಿವಮೊಗ್ಗ. |

**ಅಧಿಸೂಚನೆ**

ಅರ್ಜಿದಾರರಾದ ಮಂಜುಳಾ ಮತ್ತು ಇತರರು ಇವರು ದಿ: ನಾಗರಾಜು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:22.10.2007ರಂದು ಸಂಭವಿಸಿದ ಅಪಘಾತದಲ್ಲಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು

ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್ ಕುಮಾರ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ
ಆಯುಕ್ತರ ನ್ಯಾಯಾಲಯ, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**

**ಸಂಖ್ಯೆ: ಡಬ್ಲ್ಯೂಸಿಎ: ಇತರೆ/ ಸಿಆರ್–4/ 08, ದಿನಾಂಕ:7ನೇ ಜನವರಿ, 2008**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ಕೆ. ಶಿವಾಜಿ ರಾವ್, ಬಿನ್ ಕೃಷ್ಣೋಜಿ ರಾವ್,
2) ಎಸ್. ಮಂಜುನಾಥ, ಬಿನ್ ಶಿವಾಜಿ ರಾವ್,
3) ಎಸ್. ಪ್ರವೀಣ ಬಿನ್ ಶಿವಾಜಿ ರಾವ್,
4) ಭವಾನಿ ಶಂಕರ್ ಬಿನ್ ಶಿವಾಜಿರಾವ್,
ವಾಸ: ಮಿಶನ್ ಕಾಂಪೌಂಡ್ ಜ್ಯೂಯಲ್ ರಾಕ್ ಹೋಟೆಲ್ ಹಿಂಭಾಗ, ಶಿವಮೊಗ್ಗ.

1) ಎ.ಎಂ. ಕೃಷ್ಣೋಜಿ ರಾವ್, ಬಿನ್ ಮಂಜೋಜಿ ರಾವ್, ರಂಗೇನಹಳ್ಳಿ, ತರೀಕೆರೆ ತಾ:
2) ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಬಿ.ಹೆಚ್. ರಸ್ತೆ, ಶಿವಮೊಗ್ಗ.

**ಅಧಿಸೂಚನೆ**

ಅರ್ಜಿದಾರರಾದ ಕೆ. ಶಿವಾಜಿರಾವ್ ಬಿನ್ ಕೃಷ್ಣೋಜಿ ರಾವ್ ಮತ್ತು ಇತರರು ಇವರು ದಿ: ಇಂದಿರಾ ಬಾಯಿ 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:10.12.2005ರಂದು ಸಂಭವಿಸಿದ ಅಪಘಾತದಲ್ಲಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್ ಕುಮಾರ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ
ಆಯುಕ್ತರ ನ್ಯಾಯಾಲಯ, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**

**ಸಂಖ್ಯೆ: ಡಬ್ಲ್ಯೂಸಿಎ: ಸಿಆರ್–5/ 08, ದಿನಾಂಕ:7ನೇ ಜನವರಿ, 2008**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ಲಕ್ಷ್ಮಿ ಕೆ. ಕೋಂ ಲೇಟ್ ಸಿ. ಕುಮಾರ್
2) ನವೀನ್ ಬಿನ್ ದಿ: ಸಿ. ಕುಮಾರ್
3) ಪ್ರವೀಣ್ ಬಿನ್ ದಿ: ಸಿ. ಕುಮಾರ್
4) ರೋಹಿತ್ ಬಿನ್ ಸಿ. ಕುಮಾರ್
ವಾಸ: ವರ್ಕ್‌ಮನ್ ಬ್ಲಾಕ್, ನಂ.ಜಿ–14, ಜೋಗ, ಸಾಗರ ತಾ:
4) ಭವಾನಿ ಶಂಕರ್ ಬಿನ್ ಶಿವಾಜಿರಾವ್
ವಾಸ: ಮಿಶನ್ ಕಾಂಪೌಂಡ್ ಜ್ಯೂಯಲ್ ರಾಕ್ ಹೋಟೆಲ್ ಹಿಂಭಾಗ, ಶಿವಮೊಗ್ಗ.

1) ಸಂತ ಥಾಮಸ್ @ ಜೈಸನ್, ಬಿನ್ ಥಾಮಸ್, ಸೆಂಟ್ ಥಾಮಸ್ ಚರ್ಚ್, ಇಕ್ಕೇರಿ, ಸಾಗರ ತಾ:
2) ಶಾಖಾಧಿಕಾರಿ ಕಿರಿಯ ಇಂಜಿನಿಯರ್, ಆವಿನಹಳ್ಳಿ, ಶಾಖೆ ಮೆಸ್ಕಾಂ ವಿಭಾಗ, ಸಾಗರ.
3) ಪ್ರಧಾನ ವ್ಯವಸ್ಥಾಪಕರು, (ಅ ಮತ್ತು ಮಾನಂ ಆ) ಮೆಸ್ಕಾಂ, ಮಂಗಳೂರು.
4) ಅಧೀಕ್ಷಕ ಇಂಜಿನಿಯರ್, (ವಿ) ಮೆಸ್ಕಾಂ ವೃತ್ತ ಕಛೇರಿ, ಶಿವಮೊಗ್ಗ.

**ಅಧಿಸೂಚನೆ**

ಅರ್ಜಿದಾರರಾದ ಲಕ್ಷ್ಮಿ ಕೆ. ಮತ್ತು ಇತರರು ಇವರು ದಿ: ಸಿ.ಕುಮಾರ್ 2ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:04.06.2005ರಂದು ಸಂಭವಿಸಿದ ಅಪಘಾತದಲ್ಲಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್ ಕುಮಾರ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ
ಆಯುಕ್ತರ ನ್ಯಾಯಾಲಯ, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**

**ಸಂಖ್ಯೆ: ಡಬ್ಲ್ಯೂಸಿಎ: ಇತರೆ–6/ 08, ದಿನಾಂಕ:7ನೇ ಜನವರಿ, 2008**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ಇಂದಿರಮ್ಮ ಕೋಂ ದಿ:ಯು.ಕೆ. ಮಂಜುನಾಥ,<br>2) ಎಸ್.ಎಂ.ಅರ್ಪಿತ, ಬಿನ್ ಯು.ಕೆ. ಮಂಜುನಾಥ, ವಾಸ: 6ನೇ ಕ್ರಾಸ್, ಮಸೀದಿ ಹಿಂಭಾಗ, ಬಸವನಗುಡಿ, ಶಿವಮೊಗ್ಗ.<br>3) ಬಂಗಾರಮ್ಮ ದಿ:ಯು.ಕೆ. ಮಂಜುನಾಥ ಇವರ ತಾಯಿ ಬನಶಂಕರಿ ನಿಲಯ, 5ನೇ ತಿರುವು, ರವೀಂದ್ರನಗರ, ಶಿವಮೊಗ್ಗ. | | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ವಿಭಾಗೀಯ ನಿಯಂತ್ರಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ. |

**ಅಧಿಸೂಚನೆ**

ಅರ್ಜಿದಾರರಾದ ಇಂದಿರಮ್ಮ ಮತ್ತು ಇತರರು ಇವರು ದಿ: ಯು.ಕೆ. ಮಂಜುನಾಥ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:03.10.2007ರಂದು ಸಂಭವಿಸಿದ ಅಪಘಾತದಲ್ಲಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್ ಕುಮಾರ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ
ಆಯುಕ್ತರ ನ್ಯಾಯಾಲಯ, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**

**ಸಂಖ್ಯೆ: ಡಬ್ಲ್ಯೂಸಿಎ: ಸಿಆರ್-7/ 08, ದಿನಾಂಕ:7ನೇ ಜನವರಿ, 2008**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಇ.ಪಿ. ಸರೋಜಾ ಕೋಂ ದಿ: ವೆಂಕಟೇಶ್<br>2) ಅಕ್ಷತಾ ಬಿನ್ ದಿ: ವೆಂಕಟೇಶ್, ಸಳಿಗೆರೆ ಗ್ರಾಮ, ಉಂಬ್ಳೆಬೈಲು, ಶಿವಮೊಗ್ಗ. | | 1) ದಿ ಡಿವಿಜನಲ್ ಮ್ಯಾನೇಜರ್, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಜಿಂಕೆವನ, ಕೆ.ಎಂ.ರಸ್ತೆ, ಚಿಕ್ಕಮಗಳೂರು.<br>2) ದಿ ಎಕ್ಸಿಕ್ಯೂಟಿವ್ ಡೈರೆಕ್ಟರ್, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ, ಜಯನಗರ ಪೊಲೀಸ್ ಸ್ಟೇಷನ್ ಹತ್ತಿರ, ಶಿವಮೊಗ್ಗ.<br>3) ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ವನವಿಕಾಸ್ ಕಟ್ಟಡ, 18ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು. |

**ಅಧಿಸೂಚನೆ**

ಅರ್ಜಿದಾರರಾದ ಇ.ಪಿ. ಸರೋಜಮ್ಮ ಮತ್ತು ಇತರರು ಇವರು ದಿ: ವೆಂಕಟೇಶ್ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:19.11.2005ರಂದು ಸಂಭವಿಸಿದ ಅಪಘಾತದಲ್ಲಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್ ಕುಮಾರ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ
ಆಯುಕ್ತರ ನ್ಯಾಯಾಲಯ, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**

**ಸಂಖ್ಯೆ: ಡಬ್ಲ್ಯೂಸಿಎ: ಸಿಆರ್-1/ 08, ದಿನಾಂಕ:7ನೇ ಜನವರಿ, 2008**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಜಯಮ್ಮ ಕೋಂ ದಿ: ಕೊರಗು ಶೆಟ್ಟಿ,<br>2) ಮಂಜುನಾಥ ಬಿನ್ ದಿ: ಕೊರಗು ಶೆಟ್ಟಿ,<br>3) ರಂಜಿತಾ ಬಿನ್ ದಿ: ಕೊರಗುಶೆಟ್ಟಿ,<br>ಗೌರಿಜಡ್ಡು, ಚಿಕ್ಕಜೇನಿ ಗ್ರಾಮ, ಹೊಸನಗರ ತಾ: ಶಿವಮೊಗ್ಗ. | | 1) ಪ್ರಸಾದ್ ಬಲ್ಲಾಳ, ಬಿನ್ ಸುಭೋದ್ ಬಲ್ಲಾಳ, ಅನಂತ ಪದ್ಮನಾಭ ಮೋಟಾರ್ಸ್, ಹೆಬ್ರಿ, ಕಾರ್ಕಳ, ತಾ: ಉಡುಪಿ ಜಿ:<br>2) ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ವಿಷ್ಣು ಪ್ರಕಾಶ್, 2ನೇ ಮಹಡಿ, ಕೋರ್ಟ್ ರಸ್ತೆ, ಉಡುಪಿ. |

**ಅಧಿಸೂಚನೆ**

ಅರ್ಜಿದಾರರಾದ ಜಯಮ್ಮ ಮತ್ತು ಇತರರು ಇವರು ದಿ: ಚಂದ್ರಶೆಟ್ಟಿ 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:08.09.2007ರಂದು ಸಂಭವಿಸಿದ ಅಪಘಾತದಲ್ಲಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್ ಕುಮಾರ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ
ಆಯುಕ್ತರ ನ್ಯಾಯಾಲಯ, ಶಿವಮೊಗ್ಗ.

ಪಿ.ಆರ್.95

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು ಇವರ ಕಛೇರಿ, ದಾವಣಗೆರೆ ಉಪವಿಭಾಗ, ದಾವಣಗೆರೆ**

**ಕ್ರಮ ಸಂಖ್ಯೆ: ಎಆರ್ 31/ ದಾವಾ/ ಅಮಲ್ದಾರಿ/ 83/ 07-08, ದಿನಾಂಕ:17ನೇ ಜನವರಿ, 2008**

**ವಿಷಯ:**ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ, ಇದರ ಡಿಕ್ರಿ ಬಾಕಿದಾರ ಸಾಲಗಾರರು ಶ್ರೀ ಟಿ.ಆರ್. ಮಂಜುನಾಥ್ ಬಿನ್ ಟಿ. ರಂಗಪ್ಪ, ದಾವಣಗೆರೆ, ಇವರ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(2) (ಸಿ)ರ ಪ್ರಕಾರ ಬ್ಯಾಂಕಿಗೆ ಜಪ್ತಿ (ಅಟ್ಯಾಚ್) ಮಾಡಲ್ಪಟ್ಟ ಸ್ಥಿರಾಸ್ತಿಯನ್ನು ದಿನಾಂಕ:07.12.2007ರಂದು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿರುವುದನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 38(6)(ಎ) ರಡಿ ಸ್ಥಿರೀಕರಿಸುವ ಹಾಗೂ ನಿಯಮ 38(7) ರಡಿ ಸರ್ಟಿಫಿಕೇಟ್ ಆಫ್ ಸೇಲ್‌ನ್ನು ಜಾರಿ ಮಾಡುವ ಬಗ್ಗೆ ಆದೇಶಿಸುವ ಕುರಿತು.

**ಉಲ್ಲೇಖ:** 1) ಮಾರಾಟಾಧಿಕಾರಿಗಳು, ನಿ.441, ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ, ಇವರ ವರದಿ ದಿನಾಂಕ:14.01.2008.

2) ನೋಟೀಸ್ ಆಫ್ ಅಟ್ಯಾಚ್ಮೆಂಟ್ ದಿನಾಂಕ:24.11.2006.

3) ಬಹಿರಂಗ ಹರಾಜಿನ ನಡವಳಿಕೆಗಳು ದಿನಾಂಕ:07.12.2007.

**ಪ್ರಸ್ತಾವನೆ:**

ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ ಇದರ ಸುಸ್ತಿ ಬಾಕಿದಾರ ಸದಸ್ಯರು, ಶ್ರೀ ಟಿ.ಆರ್. ಮಂಜುನಾಥ್ ಬಿನ್ ಟಿ. ರಂಗಪ್ಪ, ದಾವಣಗೆರೆ, ಸದಸ್ಯತ್ವ ಸಂಖ್ಯೆ: 284 ಇವರು ಬ್ಯಾಂಕಿನಿಂದ ಹೈಪಾಥಿಕೇಷನ್ ಸಾಲವನ್ನು ಪಡೆದು ಸಾಲ ಮರುಪಾವತಿ ಮಾಡದೇ ಸುಸ್ತಿದಾರರಾದ ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರಡಿಯಲ್ಲಿ ಬ್ಯಾಂಕು ಸದರಿಯವರ ವಿರುದ್ಧ ಹೂಡಿದ್ದ ದಾವಾ ನಂ.ಡಿಆರ್/ ಡಿವಿಜಿ/ ಡಿಐಎಸ್/142/ 2002-03ರಲ್ಲಿ ದಿನಾಂಕ:28.05.2003 ರಂದು ಡಿಕ್ರಿ ಅವಾರ್ಡ್ ಆದ ಪ್ರಕಾರ ಕಲಂ 101 ರಡಿಯಲ್ಲಿ ಬ್ಯಾಂಕು ಇ.ಪಿ.ನಂ.364/ 03-04 (ಸಿಇಪಿ ನಂ.ಸಿಇಪಿ/ಡಿಆರ್‌ಇ/ ಯುಬಿಎಫ್/ 1739/ 2005-06 (ವ)) ರನ್ವಯ ಅಮಲ್ಜಾರಿ ಪ್ರಕರಣ ಆದೇಶವನ್ನು ಪಡೆದಿದ್ದು ಸದರಿಯವರು ಬ್ಯಾಂಕಿಗೆ ಆಧಾರ ಮಾಡಿದ್ದ ಸ್ಥಿರಾಸ್ತಿಯನ್ನು ಕಲಂ 101-ಬಿ ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 38-ಎ(5) ರಡಿಯಲ್ಲಿ ವಸೂಲಾಧಿಕಾರಿಗಳವರ ದಿನಾಂಕ:17.06.2006ರ ಆದೇಶದ ಮೇರೆಗೆ ಬ್ಯಾಂಕಿಗೆ ವರ್ಗಾಯಿಸಲ್ಪಟ್ಟಿದ್ದು, ಬ್ಯಾಂಕು ಈ ಆಸ್ತಿಯನ್ನು ದಿನಾಂಕ:25.10.2006ರಂದು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ, ಈ ಮಾರಾಟದಿಂದ ಬಂದ ಹಣವನ್ನು ಸದರಿಯವರಿಂದ ಬ್ಯಾಂಕಿಗೆ ಬರಬೇಕಾಗಿದ್ದ ಸಾಲದ ಬಾಕಿಗೆ ಹೊಂದಾಣಿಕೆ ಮಾಡಿಕೊಂಡಿರುತ್ತದೆ. ಆದಾಗ್ಯೂ ಸಹ ಅವರಿಂದ ಬ್ಯಾಂಕಿಗೆ ಬರಬೇಕಾದ ಬಾಕಿಯು ಪೂರ್ಣವಾಗಿ ವಸೂಲಾಗದೇ ಇರುವ ಪ್ರಯುಕ್ತ ಬ್ಯಾಂಕಿನ ನಿ.441ರ ಮಾರಾಟಾಧಿಕಾರಿಗಳು, ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(2)(ಸಿ) ರಡಿಯಲ್ಲಿ ಈ ಆದೇಶದ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ, ಬ್ಯಾಂಕಿಗೆ ಈ ಹಿಂದೆ ಆಧಾರವಾಗಿಲ್ಲದ ಸ್ಥಿರಾಸ್ತಿಯನ್ನು ದಿನಾಂಕ:24.11.2006ರ ನೋಟೀಸ್ ಆಫ್ ಅಟ್ಯಾಚ್ಮೆಂಟ್ ಮೂಲಕ ಬ್ಯಾಂಕಿಗೆ ಅಟ್ಯಾಚ್ (ಜಪ್ತಿ) ಮಾಡಿರುತ್ತಾರೆ. ಈ ನೋಟೀಸಿನ ಪ್ರಕಾರ ಸದರಿ ಆಸ್ತಿಯ ಭೂ ದಾಖಲೆಗಳಲ್ಲಿ ಅಟ್ಯಾಚ್ಮೆಂಟ್ ಬಗ್ಗೆ ನಮೂದಿಸಲಾಗಿರುತ್ತದೆ.

ಬ್ಯಾಂಕಿನ ನಿ.441ರ ಮಾರಾಟಾಧಿಕಾರಿಗಳು ಅಮಲ್ಜಾರಿ ಪ್ರಕರಣ ಸಂಖ್ಯೆ:364/ 03-04 ರಡಿಯಲ್ಲಿ ವಸೂಲಾತಿ ಕ್ರಮವನ್ನು ಮುಂದುವರಿಸಿ ಅಂತಿಮವಾಗಿ ದಿನಾಂಕ:07.12.2007 ರಂದು ಬ್ಯಾಂಕಿಗೆ ಅಟ್ಯಾಚ್ (ಜಪ್ತಿ) ಮಾಡಲಾದ ಈ ಆದೇಶದ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ ಶ್ರೀಮತಿ ಟಿ.ಆರ್. ಬಸಮ್ಮ ಕೋಂ ಕೆ.ಜಿ. ಚಂದ್ರಶೇಖರಪ್ಪ ಡೋರ್ ನಂ.104, ಬಿ. ಕಲಪನಹಳ್ಳಿ, ದಾವಣಗೆರೆ ತಾ: ಇವರಿಗೆ ಅತೀ ಹೆಚ್ಚಿನ ಬಿಡ್ಡು ಮೊತ್ತ ರೂ.2,98,000-00 (ರೂ. ಎರಡು ಲಕ್ಷದ ತೊಂಭತ್ತೆಂಟು ಸಾವಿರ ಮಾತ್ರ)ಕ್ಕೆ ಹರಾಜು ಬಿಡ್ಡನ್ನು ನಿಲ್ಲಿಸಿ ಈ ಸ್ಥಿರಾಸ್ತಿಯನ್ನು ಅವರಿಗೆ ಮಾರಾಟ ಮಾಡಿರುತ್ತಾರೆ.

ಬ್ಯಾಂಕಿನ ನಿ.441, ಮಾರಾಟಾಧಿಕಾರಿಗಳು ಈ ಬಹಿರಂಗ ಹರಾಜು ಮಾರಾಟವನ್ನು ಸ್ಥಿರೀಕರಿಸಿ ಸರ್ಟಿಫಿಕೇಟ್ ಆಫ್ ಸೇಲ್‌ನ್ನು ಜಾರಿ ಮಾಡಲು ಉಲ್ಲೇಖ-1ರ ವರದಿ ಪ್ರಕಾರ ಈ ಕಛೇರಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಪರಿಗಣಿಸಿದೆ. ನಿಯಮ 38(2)(ಐ)ರ ಪ್ರಕಾರ ಖರೀದಿದಾರರು ಬ್ಯಾಂಕಿಗೆ ಹರಾಜು ಬಿಡ್ಡಿನ ಪೂರ್ಣ ಹಣ ಹಾಗೂ ನೋಂದಣಿಗೆ ತಗಲುವ ಮೊತ್ತವನ್ನು ನಿಯಮಾನುಸಾರವಾಗಿ ನಿಗದಿತ ಅವಧಿಯೊಳಗೆ ಪಾವತಿಸಿರುತ್ತಾರೆ.

ಡಿಕ್ರಿ ಬಾಕಿದಾರರಿಗೆ ನಿಯಮ 38(4)(ಎ) ಮತ್ತು (ಬಿ) ಹಾಗೂ ನಿಯಮ 38(5)ರ ಪ್ರಕಾರ ಮಾರಾಟಾಧಿಕಾರಿಯವರು ಹರಾಜಿನ ದಿನವೇ ನೋಟೀಸನ್ನು ಹೊರಡಿಸಿ ಈ ನೋಟೀಸನ್ನು ಪತ್ರಿಕಾ ಪ್ರಕಟಣೆಯ ಮೂಲಕ

ಪ್ರಚಾರ ಪಡಿಸಿದ್ದರೂ ಸಹ ಈ ನಿಯಮದ ಪ್ರಕಾರ ಗೊತ್ತುಪಡಿಸಲಾಗಿರುವ 30 ದಿನಗಳ ಅವಧಿಯಲ್ಲಿ ಸದರಿ ಡಿಕ್ರಿ ಬಾಕಿದಾರರು ಅಥವಾ ಈ ಆಸ್ತಿಯಲ್ಲಿ ಯಾವುದೇ ಹಿತಾಸಕ್ತಿ (Title) ಹೊಂದಿರುತ್ತೇವೆ ಎಂದು ಕ್ಲೈಮ್ ಮಾಡುವಂತಹ ಯಾರೇ ವ್ಯಕ್ತಿಗಳಿಂದ ನಿಯಮ 38(4)(ಎ) ಮತ್ತು (ಬಿ) ರಡಿ ಈ ಕಛೇರಿಯಲ್ಲಿ ಬ್ಯಾಂಕಿಗೆ ಬರಬೇಕಾದ ಬಾಕಿಯ ಪೂರ್ಣ ಮೊತ್ತ ಹಾಗೂ ಇತರೆ ಖರ್ಚುಗಳು ಸೇರಿದಂತೆ ಮೊಬಲಗನ್ನು ಠೇವಣಿ ಮಾಡಿ ಈ ಹರಾಜನ್ನು ರದ್ದುಪಡಿಸಿಕೊಳ್ಳಲು ಮನವಿಯನ್ನು ಸಲ್ಲಿಸಿರುವುದಿಲ್ಲ, ಅಥವಾ ನಿಯಮ 38(5) ರಡಿ ಈ ಹರಾಜಿನ ಪ್ರಕ್ರಿಯೆ ಸಂಬಂಧ ಯಾವುದೇ ಆಕ್ಷೇಪಣೆಗಳನ್ನು ಸಲ್ಲಿಸಿರುವುದಿಲ್ಲ. ಈ ಆಸ್ತಿಯ ದಾಖಲಾತಿಗಳ ಪ್ರಕಾರ ಇದು ಸದರಿ ಶ್ರೀ ಟಿ.ಆರ್. ಮಂಜುನಾಥ್ ಇವರ ಸ್ವಂತ ಹಾಗೂ ಸಂಪೂರ್ಣ ಹಕ್ಕಿಗೆ ಸೇರಿದ್ದಾಗಿದ್ದು, ಇದರಲ್ಲಿ ಬೇರೆ ಯಾರೂ ಹಿತಾಸಕ್ತಿ (Title) ಹೊಂದಿರುವುದಿಲ್ಲವೆಂದು ಕಂಡುಬರುತ್ತದೆ.

ನಿಯಮ 38(4)(ಎ) ಮತ್ತು (ಬಿ)ರ ಮತ್ತು ನಿಯಮ 38(5)ರ ಪ್ರಕಾರ ಸಂಬಂಧಪಟ್ಟವರಿಗೆ ನಿಯಮಾನುಸಾರ ಅವಕಾಶವನ್ನು ನೀಡಿದಾಗ್ಯೂ ಸಹ ಯಾರಿಂದಲೂ ಯಾವುದೇ ಠೇವಣಿ ಮತ್ತು ಮನವಿ ಸಲ್ಲಿಸದೇ ಅಥವಾ ಆಕ್ಷೇಪಣೆಗಳು ಮಾಡದೇ ಇರುವುದರಿಂದ ಈ ಹರಾಜಿನ ಕುರಿತು ಯಾರಿಗೂ ಆಕ್ಷೇಪಣೆಗಳು ಇರುವುದಿಲ್ಲವೆಂದು ಅಭಿಪ್ರಾಯಪಟ್ಟು ಬ್ಯಾಂಕಿಗೆ ಅಟ್ಯಾಚ್ (ಜಪ್ತಿ) ಮಾಡಲ್ಪಟ್ಟ ಈ ಆದೇಶದ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ದಿನಾಂಕ:07.12.2007 ರಂದು ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಸಫಲ ಬಿಡ್ಡುದಾರರಿಗೆ ಮಾರಾಟ ಮಾಡಿರುವುದನ್ನು ನಿಯಮ 38(6)(ಎ) ರಡಿ ಸ್ಥಿರೀಕರಿಸಲು ಹಾಗೂ ನಿಯಮ 38(7) ರಡಿ ಸರ್ಟಿಫಿಕೇಟ್ ಆಫ್ ಸೇಲ್‌ನ್ನು ಜಾರಿ ಮಾಡಲು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಗಣಿಸಿ ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ಡಿಕ್ರಿ ಬಾಕಿದಾರ ಸಾಲಗಾರರು, ಶ್ರೀ ಟಿ.ಆರ್. ಮಂಜುನಾಥ್ ಬಿನ್ ಟಿ. ರಂಗಪ್ಪ, ದಾವಣಗೆರೆ ಇವರಿಗೆ ಸೇರಿದ್ದ ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 38(2)(ಸಿ) ರಡಿ ಬ್ಯಾಂಕಿಗೆ ಅಟ್ಯಾಚ್ (ಜಪ್ತಿ) ಮಾಡಲ್ಪಟ್ಟ ಈ ಆದೇಶದ ಷೆಡ್ಯೂಲ್‌ನಲ್ಲಿ ವಿವರಿಸಿದಂತಹ ಸ್ಥಿರಾಸ್ತಿಯನ್ನು ಬ್ಯಾಂಕಿನ ಬಾಕಿ ವಸೂಲಿಗಾಗಿ ದಿನಾಂಕ:07.12.2007ರಂದು ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್ಡುದಾರರಾದ ಶ್ರೀಮತಿ ಟಿ.ಆರ್. ಬಸಮ್ಮ ಕೋಂ ಕೆ.ಜಿ. ಚಂದ್ರಶೇಖರಪ್ಪ, ಡೋರ್ ನಂ.104, ಬಿ. ಕಲಪನಹಳ್ಳಿ, ದಾವಣಗೆರೆ ತಾ: ಇವರಿಗೆ ರೂ.2,98,000–00 (ರೂ. ಎರಡು ಲಕ್ಷ ತೊಂಭತ್ತೆಂಟು ಸಾವಿರ ಮಾತ್ರ) ಮೊತ್ತಕ್ಕೆ ಮಾರಾಟ ಮಾಡಿರುವುದನ್ನು ದಾವಣಗೆರೆ ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು ಆಗಿರುವ ಎಸ್.ಎಚ್. ಬೆಲ್ಲದ್, ಕೆ.ಸಿ.ಎಸ್. ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 38(6)(ಎ) ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಈ ಪ್ರಕರಣದಲ್ಲಿ ಸ್ಥಿರಾಸ್ತಿಯ ಬಹಿರಂಗ ಹರಾಜು ಮಾರಾಟವನ್ನು ಸ್ಥಿರೀಕರಿಸಿ ಮತ್ತು ಈ ಸ್ವತ್ತಿನ ಮಾಲೀಕತ್ವದ ಹಕ್ಕನ್ನು ಸದರಿ ಅತೀ ಹೆಚ್ಚಿನ ಬಿಡ್ಡುದಾರರಿಗೆ ಸ್ವಾಧೀನಪಡಿಸಿ ಇದರ ಹಕ್ಕು ಪ್ರಯೋಜನಗಳಿಗೆ ಸದರಿಯವರು ಡಿಕ್ರಿ ಬಾಕಿದಾರರ ಉತ್ತರಾಧಿಕಾರಿಯಾಗಿರುತ್ತಾರೆ ಎಂದು ದೃಢೀಕರಿಸಿರುತ್ತೇನೆ ಮತ್ತು ಈ ಸಂಬಂಧ ಪ್ರಕಟಣೆಯನ್ನು ಹೊರಡಿಸಿರುತ್ತೇನೆ. ಹಾಗೂ ನಿಯಮ 38(7)ರಡಿ ಸರ್ಟಿಫಿಕೇಟ್ ಆಫ್ ಸೇಲ್‌ನ್ನು ಜಾರಿ ಮಾಡಲು ಆದೇಶಿಸಿರುತ್ತೇನೆ.

ಸರ್ಟಿಫಿಕೇಟ್ ಆಫ್ ಸೇಲ್‌ನ್ನು ಜಾರಿ ಮಾಡುವ ಸಂಬಂಧವಾಗಿ ಆಸ್ತಿಯ ಖರೀದಿದಾರರು ಬ್ಯಾಂಕಿಗೆ ಜಮಾ ಮಾಡಿರುವ ನೋಂದಣಿ ಸಂಬಂಧ ಮೊಬಲಗಿನಿಂದ ಆಸ್ತಿಯ ನೋಂದಣಿಗಾಗಿ ಅವಶ್ಯವಿರುವ ಸ್ಟ್ಯಾಂಪ್ ಪೇಪರನ್ನು ಖರೀದಿಸಿ ಈ ಆದೇಶ ತಲುಪಿದ 15 ದಿನಗಳೊಳಗಾಗಿ ಈ ಕೆಳಗೆ ಸಹಿ ಮಾಡಿರುವವರ ಸಮ್ಮುಖದಲ್ಲಿ ಹಾಜರುಪಡಿಸಲು ಡಿಕ್ರಿ ಹೋಲ್ಡರ್ ಬ್ಯಾಂಕಿನವರಿಗೆ ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಹಸ್ತ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಈ ದಿನ ದಿನಾಂಕ:17.01.2008ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾಧಿಕಾರಿಗಳು,
ದಾವಣಗೆರೆ ಉಪವಿಭಾಗ, ದಾವಣಗೆರೆ.

**ಸ್ಥಿರಾಸ್ತಿ ಷೆಡ್ಯೂಲ್**

"ದಾವಣಗೆರೆ ತಾಲ್ಲೂಕಿನ ಕಸಬಾ ಹೋಬಳಿಯ ಆವರಗೆರೆ ಗ್ರಾಮದ ಸರ್ವೆ ನಂ.296/ 1ಪಿ1, ಖಾತೆ ನಂ.986, ಇದರಲ್ಲಿರುವ 29 ಗುಂಟೆ ಕೃಷಿ ಜಮೀನು–ಇದಕ್ಕೆ ಚಕ್ಕುಬಂದಿ:

**ಪೂರ್ವಕ್ಕೆ:** ಸದರಿ ಸರ್ವೆ ನಂ.ಪೈಕಿ ಎರಡನೇ ಪಾರ್ಟಿ ಟಿ.ಆರ್. ಮಲ್ಲಿನಾಥ್ ಬಾಬ್ತು ಜಮೀನು
**ಪಶ್ಚಿಮಕ್ಕೆ:** ಹಳ್ಳ

**ಉತ್ತರಕ್ಕೆ:** ಇದೇ ಸರ್ವೆ ನಂ.ನಲ್ಲಿ ಬೇಸಾಯ ಸಾಗಿಸಲು ಬಿಟ್ಟಿರುವ 10 ಅಡಿ ಅಗಲದ ಬಂಡಿದಾರಿ ಆಚೆ ರೇವಣಸಿದ್ದಪ್ಪನವರ ಜಮೀನು

**ದಕ್ಷಿಣಕ್ಕೆ:** ನೀಲಮ್ಮ ಕೋಂ ಮಹದೇವಪ್ಪನವರ ಜಮೀನು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾಧಿಕಾರಿಗಳು,
ದಾವಣಗೆರೆ ಉಪವಿಭಾಗ, ದಾವಣಗೆರೆ.

ಪಿ.ಆರ್.97

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಕೃಮಾಇ/ 26/ ಚುನಾವ/ 2005, ಬೆಂಗಳೂರು, ದಿನಾಂಕ:22/25ನೇ ಜನವರಿ, 2008**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಕಾಯ್ದೆ, 1966ರ ಪ್ರಕರಣ 11ರ ಉಪ ಪ್ರಕರಣ (1) (viii)ರ ಪ್ರಕಾರ ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಕೃಮಾಇ/ 26/ ಚುನಾವ/2005, ದಿನಾಂಕ:07.01.2006ರಲ್ಲಿ ಮಂಗಳೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಬೆಂಗಳೂರು (ಯಶವಂತಪುರ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯವರನ್ನು ಇಲಾಖಾ ಪ್ರತಿನಿಧಿಯನ್ನಾಗಿ ನೇಮಿಸಲಾಗಿರುತ್ತದೆ. ಪ್ರಸ್ತುತ ಆಡಳಿತಾತ್ಮಕ ಹಿತದೃಷ್ಟಿಯಿಂದ ಸದರಿ ಆದೇಶವನ್ನು ರದ್ದುಗೊಳಿಸಿ ಮೇಲ್ಕಂಡ ಕಾಯ್ದೆಯ ಪ್ರಕರಣದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಎಸ್. ಸೆಲ್ವಕುಮಾರ್ ಆದ ನಾನು, ಮಂಗಳೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಅಧಿಕಾರಿಯನ್ನು ಸದಸ್ಯರನ್ನಾಗಿ ನಾಮಕರಣ ಮಾಡಿದ್ದೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿ |
|---|---|---|---|
| 1. | ದಕ್ಷಿಣ ಕನ್ನಡ ಜಿಲ್ಲೆ | ಮಂಗಳೂರು | ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮೈಸೂರು. |

**ಎಸ್. ಸೆಲ್ವಕುಮಾರ್**
ನಿರ್ದೇಶಕರು.

ಪಿ.ಆರ್.107

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು**

**ವಿಷಯ:** ಕೊಪ್ಪ ಮತ್ತು ಶೃಂಗೇರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಚುನಾವಣೆ ನಡೆಸುವ ಬಗ್ಗೆ.

**ಪ್ರಸ್ತಾವನೆ:**

ಚುನಾಯಿತ ಕೊಪ್ಪ ಮತ್ತು ಶೃಂಗೇರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ 5 ವರ್ಷಗಳ ಚುನಾಯಿತ ಅಧಿಕಾರಾವಧಿಯು ಕ್ರಮವಾಗಿ ದಿನಾಂಕ:23.02.2008 ಮತ್ತು 16.02.2008ರಂದು ಮುಕ್ತಾಯಗೊಳ್ಳುವುದರಿಂದ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ಕಲಂ 38(1)ರನ್ವಯ ಚುನಾವಣೆಯನ್ನು ಜರುಗಿಸಬೇಕಾಗಿರುವುದರಿಂದ ಸದರಿ ಮಾರುಕಟ್ಟೆ ಸಮಿತಿಗಳಿಗೆ ಚುನಾವಣೆ ನಡೆಸುವ ಸಂಬಂಧ ಮೇಲ್ಕಂಡ ಅಧಿನಿಯಮದ ಕಲಂ 13(1)ರನ್ವಯ ನಿರ್ದೇಶನಗಳನ್ನು ನೀಡಲು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಕೃಮಾಇ/ 01/ ಚುನಾವ/ 2008, ಬೆಂಗಳೂರು, ದಿನಾಂಕ:5ನೇ ಜನವರಿ, 2008**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 13(1) ಹಾಗೂ ನಿಯಮಾವಳಿಗಳು, 1968ರ ನಿಯಮ 5(17) (ಎ)ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾದ ಎಸ್. ಸೆಲ್ವಕುಮಾರ್ ಆದ ನಾನು, ತಮ್ಮ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಕೊಪ್ಪ ಮತ್ತು ಶೃಂಗೇರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಚುನಾವಣೆ ನಡೆಸುವ ಸಂಬಂಧ ಮತದಾರರ ಪಟ್ಟಿಯನ್ನು ನಿಯಮ 5ರಂತೆ ವಿವರವಾಗಿ (Intensively) ಪರಿಷ್ಕರಿಸಿ ಹಾಗೂ ಕಾಯ್ದೆ ಕಲಂ 14ರ ಮೇರೆಗೆ ಚುನಾವಣಾ ಮತಕ್ಷೇತ್ರಗಳನ್ನು ವಿಂಗಡಿಸಲು (delimitation) ಕ್ರಮ ಕೈಗೊಂಡು, ತದನಂತರ ಚುನಾವಣಾ ವೇಳಾಪಟ್ಟಿಯನ್ನು ಹೊರಡಿಸಿ, ಎಲ್ಲಾ ಚುನಾವಣಾ ಪ್ರಕ್ರಿಯೆಗಳನ್ನು ಈ ಕೆಳಕಂಡ ಅಂಶಗಳನ್ನು ಅನುಸರಿಸಿ ಪೂರ್ಣಗೊಳಿಸುವ ಬಗ್ಗೆ ಕ್ರಮ ಕೈಗೊಳ್ಳಲು ನಿರ್ದೇಶಿಸಿದ್ದೇನೆ.

- ❖ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 1, 2 ಮತ್ತು 11 ರಿಂದ 42 ಮತ್ತು ನಿಯಮಾವಳಿಗಳು, 1968ರ ನಿಯಮ 1 ರಿಂದ 46 ಹಾಗೂ 1 ರಿಂದ 25 ರವರೆಗಿನ ನಮೂನೆಗಳನ್ನು ಚುನಾವಣೆ ನಡೆಸುವ ಸಂಬಂಧ ಅವಲೋಕಿಸಬಹುದಾಗಿರುತ್ತದೆ.
- ❖ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11 (1) (i) ರಿಂದ (v) ರಲ್ಲಿ ನಿರ್ದಿಷ್ಟಪಡಿಸಿರುವ ಕ್ಷೇತ್ರಗಳಿಗೆ ನಿಯಮಾವಳಿಗಳು, 1968ರ ನಿಯಮ 5, 5ಎ, 5ಬಿ ಮತ್ತು 5ಸಿ ಪ್ರಕಾರ ಮತದಾರರ ಪಟ್ಟಿಗಳನ್ನು ಪರಿಷ್ಕರಿಸಿ ಸಿದ್ಧಗೊಳಿಸಬೇಕಾಗಿರುತ್ತದೆ. ಪ್ರಕರಣ 11 (1) (i) ರಲ್ಲಿರುವ ಕೃಷಿಕ ಮತಕ್ಷೇತ್ರಗಳನ್ನು ವಿವರವಾಗಿ (intensively) ಪರಿಷ್ಕರಿಸಬೇಕಾಗಿರುತ್ತದೆ.
- ❖ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ನಿಯಮಾವಳಿಗಳು, 1968ರ ನಿಯಮ 3ರನ್ವಯ 2008ರ ಜನವರಿ 1 ಕ್ಕೆ ಅನ್ವಯಿಸುವಂತೆ ಮತದಾರರ ಪಟ್ಟಿಗಳನ್ನು ಪರಿಷ್ಕರಿಸಬೇಕಾಗಿರುತ್ತದೆ.
- ❖ ಕಾಯ್ದೆಯ ಪ್ರಕರಣ 2 (2ಬಿ) ನಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಸರ್ಕಾರವು ಹಿಂದುಳಿದ ವರ್ಗ "ಎ" ಮತ್ತು "ಬಿ" ಗಳ ವರ್ಗೀಕರಣವನ್ನು ಅಧಿಸೂಚನೆ ಸಂಖ್ಯೆ: ಸಇ/ 205/ ಎಂಆರ್‌ಇ/ 2002, ದಿನಾಂಕ:01.01.2003ರಲ್ಲಿ ನಿಗದಿಪಡಿಸಿದ್ದು, ಅದರಂತೆ ಕೃಷಿಕರ ಮತಕ್ಷೇತ್ರಗಳ ಸ್ಥಾನಗಳನ್ನು ಕಾಯ್ದಿರಿಸುವಾಗ ಅನುಸರಿಸುವುದು.
- ❖ ಮತದಾರರ ಪಟ್ಟಿಗಳನ್ನು ಸಿದ್ಧಪಡಿಸಲು ಹಾಗೂ ಪ್ರಕಟಗೊಳಿಸಲು, ಮತಪತ್ರಗಳನ್ನು ಮುದ್ರಿಸಲು ಮತ್ತು ಚುನಾವಣೆ ನಡೆಸುವ ಸಂಬಂಧ ಅವಶ್ಯವಿರುವ ಕಂದು/ ಬಿಳಿ ಹಾಳೆಗಳನ್ನು, ಲೇಖನ ಹಾಗೂ ಇತರೆ ಸಾಮಗ್ರಿಗಳನ್ನು ಸರ್ಕಾರದ ಮುದ್ರಣಾಲಯಗಳಿಂದ/ ಲೇಖನ ಸಾಮಗ್ರಿ ಮಳಿಗೆಗಳಿಂದ ಪಡೆಯಲು ಹಾಗೂ ಸಂಬಂಧಿಸಿದ ಬಿಲ್ಲುಗಳನ್ನು ಪಡೆದು ನೇರವಾಗಿ ಸದರಿಯವರಿಗೆ ಪಾವತಿಸಲು ಕ್ರಮ ಕೈಗೊಳ್ಳುವುದು.
- ❖ ನಮೂನೆಗಳು, ಕವರ್‌ಗಳು, ಭಿತ್ತಿ ಪತ್ರಗಳು (ಪೋಸ್ಟರ್ಸ್), ಬ್ಯಾಡ್ಜುಗಳು, ಕಾರ್ಡುಗಳು, ಮತದಾರರ ಪಟ್ಟಿ, ಮತಪತ್ರಗಳು, ಪೇಪರ್ ಸೀಲ್ಸ್ ಇತ್ಯಾದಿಗಳನ್ನು ಸ್ಥಳೀಯವಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಗಳಲ್ಲಿ ಪಾರದರ್ಶಕ ಕಾಯ್ದೆ ಹಾಗೂ ನಿಯಮಗಳ ಪ್ರಕಾರ ಕ್ರಮ ಕೈಗೊಳ್ಳುವುದು.
- ❖ ಚುನಾವಣೆಗಳನ್ನು ಯಾವುದೇ ಕಾರಣಕ್ಕೆ ವಿಳಂಬವಾಗದಂತೆ ನಿಗದಿಪಡಿಸಿದಂತೆ ನಡೆಸಲು ಕ್ರಮ ಕೈಗೊಳ್ಳುವುದು.
- ❖ ಚುನಾವಣೆಗೆ ಅವಶ್ಯವಿರುವ ಆಯವ್ಯಯದ ಬಗ್ಗೆ ಬೇಡಿಕೆ ಸಲ್ಲಿಸಿದಲ್ಲಿ, ಸೂಕ್ತ ಕ್ರಮ ಕೈಗೊಳ್ಳಲಾಗುವುದು.

**ಎಸ್. ಸೆಲ್ವಕುಮಾರ್**

ಪಿ.ಆರ್.108 ನಿರ್ದೇಶಕರು.

## ನಗರಾಭಿವೃದ್ಧಿ ಇಲಾಖೆ

## ಅಂತಿಮ ಅಧಿಸೂಚನೆ

### ಸಂಖ್ಯೆ: ನಅಇ 359 ಮೈಅಪ್ರಾ 2004, ಬೆಂಗಳೂರು, ದಿನಾಂಕ:21ನೇ ಜನವರಿ, 2008

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ದೇವನೂರು 1ನೇ ಹಂತದ ಬಡಾವಣೆಗಾಗಿ ಕ್ಯಾತಮಾರನಹಳ್ಳಿ ಗ್ರಾಮದ ಈ ಕೆಳಕಂಡ ಜಮೀನನ್ನು ಭೂ ಸ್ವಾಧೀನಪಡಿಸಿಕೊಳ್ಳಲು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ, 1987ರ ಕಲಂ 17(1)ರ ಪ್ರಕಾರ ಪ್ರಾಥಮಿಕ ಅಧಿಸೂಚನೆಯನ್ನು ದಿನಾಂಕ:13.05.2004ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿತ್ತು.

ಈ ಕೆಳಕಂಡ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ದೇವನೂರು 1ನೇ ಹಂತದ ಬಡಾವಣೆ ನಿರ್ಮಾಣಕ್ಕೆ ಅವಶ್ಯಕವಾಗಿರುವುದು ಸರ್ಕಾರಕ್ಕೆ ಮನದಟ್ಟಾಗಿದೆ. ಆದ್ದರಿಂದ, ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 19(1) ಮತ್ತು (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಜಮೀನನ್ನು ದೇವನೂರು 1ನೇ ಹಂತದ ಬಡಾವಣೆಗಾಗಿ ಭೂ ಸ್ವಾಧೀನಪಡಿಸಿಕೊಳ್ಳಲು ತೀರ್ಮಾನಿಸಿದೆ.

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ವಿಶೇಷ ಭೂ ಸ್ವಾಧೀನಾಧಿಕಾರಿಯವರಿಗೆ ಈ ಜಮೀನನ್ನು ಭೂ ಸ್ವಾಧೀನ ಪಡಿಸಿಕೊಳ್ಳಲು ಭೂ ಸ್ವಾಧೀನ 3(ಸಿ) ರನ್ವಯ ಅಧಿಕಾರವನ್ನು ನೀಡಲಾಗಿದೆ.

ಅನುಸೂಚಿ

ಜಿಲ್ಲೆ: ಮೈಸೂರು ತಾಲ್ಲೂಕು: ಮೈಸೂರು ಹೋಬಳಿ:ಕಸಬಾ ಗ್ರಾಮ: ಕ್ಯಾತಮಾರನಹಳ್ಳಿ

| ಸ್ವತ್ತಿನ ವಿವರಗಳು | | | | | | ಚೌತರ್ಫು | | | | |
|---|---|---|---|---|---|---|---|---|---|---|
| ಕ್ರ. ಸಂ. | ಸರ್ವೆ ನಂ. | ಖಾತೆದಾರರ/ ಅನುಭವದಾರರ ಹೆಸರು | ಖುಷ್ಕಿ ಎ.ಗುಂ. | ಜುಮ್ಲಾ ಎ.ಗುಂ. | ಕಂದಾಯ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ಭೂ ಸ್ವಾಧೀನ ಪಡಿಸಿ ಕೊಳ್ಳಬೇಕಾದ ವಿಸ್ತೀರ್ಣ ಎ.ಗುಂ. |
| 1. | 87/2 | ಮಹಮ್ಮದ್ ಉಮ್ಮರ್ ಮದಾನಿ | 0–21 | 0–21 | 0–43 | ದೇವನೂರು ಗಡಿ | ಸ.ನ. 84 ಮತ್ತು 87/1 | ಸ.ನಂ. 87/1 | ಮೈಸೂರು ಮಹದೇವಪುರ ರಸ್ತೆ | 0–21 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.130

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ

## ಪ್ರಕರಣ ಸಂಖ್ಯೆ: 26:08: ಎಫ್/ 1252, ದಿನಾಂಕ:24ನೇ ಜನವರಿ, 2008

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ಪ್ರಭಯ್ಯ ತಂದೆ: ಕುಂಟ ತಿಪ್ಪೇಸ್ವಾಮಿ 45 ವರ್ಷ (ಮೃತನ ತಂದೆ)
2) ಶ್ರೀಮತಿ ನೀಲಮ್ಮ ಗಂ: ಪ್ರಭಯ್ಯ, 40 ವರ್ಷ (ಮೃತನ ತಾಯಿ)
3) ತಿಪ್ಪೇಶಿ ತಂದೆ: ಪ್ರಭಯ್ಯ 19 ವರ್ಷ (ಮೃತನ ಸಹೋದರ)
4) ಗಂಗಾಧರಯ್ಯ ತಂದೆ: ಪ್ರಭಯ್ಯ, 18 ವರ್ಷ (ಮೃತನ ಸಹೋದರ)
R/o ಅಶೋಕ ಕಾಡ ಸಿದ್ದಾಪುರ ಗ್ರಾಮ, ಮೊಳಕಾಲ್ಮೂರು ತಾ: ಚಿತ್ರದುರ್ಗ ಜಿಲ್ಲೆ.

1) ಮೆ: ಮಹಾದೇವಸ್ವಾಮಿ, ಜಿನ್ನಿಂಗ್ ಅಂಡ್ ಪ್ರೆಸ್ಸಿಂಗ್ ಕಾಟನ್ ಫ್ಯಾಕ್ಟರಿ, ಮುಂಡ್ರಿಗಿ ಇಂಡಸ್ಟ್ರಿಯಲ್ ಏರಿಯಾ, ಬಳ್ಳಾರಿ.

**ಪ್ರಕಟಣೆ**

ಪ್ರಭಯ್ಯ ತಂದೆ: ಕುಂಟ ತಿಪ್ಪೇಸ್ವಾಮಿ (2) ಶ್ರೀಮತಿ ನೀಲಮ್ಮ ಗಂಡ: ಪ್ರಭಯ್ಯ (3) ತಿಪ್ಪೇಶಿ ತಂ: ಪ್ರಭಯ್ಯ (4) ಗಂಗಾಧರಯ್ಯ ತಂ: ಪ್ರಭಯ್ಯ ಇವರು ತಾವು ಮೃತ ಸಿದ್ದು ಅಲಿಯಾಸ್ ಸಿದ್ದಪ್ಪ ಈತನ ತಂದೆ–ತಾಯಿ ಹಾಗೂ ಸಹೋದರರಾಗಬೇಕೆಂದು ಮತ್ತು ಅವಲಂಬಿತರು ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಿದ್ದು ಅಲಿಯಾಸ್ ಸಿದ್ದಪ್ಪ ದಿನಾಂಕ:09.01.2008ರಂದು 1ನೇ ಪ್ರತಿವಾದಿ ಗೋವಿಂದರಾಜುಲು ಇವರ ಬಳಿ ಕೂಲಿ ಕೆಲಸ ಮಾಡುತ್ತಿದ್ದಾಗ ಮಧ್ಯರಾತ್ರಿ ಬೆಂಕಿ ಅನಾಹುತದಿಂದ ಅಪಘಾತವಾಗಿ ಮೃತಹೊಂದಿರುತ್ತಾನೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

ಪಿ.ಆರ್.133

**OFFICE OF THE XTH ADDL. CHIEF METROPOLITAN MAGISTRATE, MAYO HALL, BANGALORE**
**NOTIFICATION**
**TO.NO.41/ 08, BANGALORE, DATED:27TH MARCH, 2008**

It is hereby notified to the General Public that the following unclaimed vehicles are in the custody of Mahadevapura Police, Bangalore, which are seized under various C.Misc. Cases.

| Sl. No. | C.Misc No. and PF No. | Type of Vehicle | Registration No. Chassis No. Engine No. |
|---|---|---|---|
| 1. | C.Misc. No.591/06<br>PF No.106/06 | TVS Victor M/C Black Colour | Reg.No. KA-05-ER-5985<br>Ch.No.MD625AF1141C30092<br>Eng.No. OFIC41182057 |
| 2. | C.Misc.No.594/06<br>PF No.107/06 | Hero Honda<br>Splendor M/C Black Colour | Reg No.KA-03.Y-5685<br>Ch.No.99L19C04088<br>Eng. No.02K21M04675 |
| 3. | C.Misc No.9/07<br>PF No.11(a)/07 | Hero Honda Passion<br>M/C Black Colour | Reg.No.KL-11-Q-6914<br>Ch.No.02K21C03821<br>Eng. No.02K21M04675 |
| 4. | C.Misc No.121/07<br>PF No.25/07 | Yamaha RXZ M/C Black Colour | Reg.No.KA-29-H-38<br>Ch. No.96LIL5055927<br>Eng. No.IL5055927 |
| 5. | C.Misc. No. 122/07<br>PF No.26/07 | Hero Honda Splendor+<br>M/C Black Colour | Reg.No. KA-03-EL-4771<br>Ch.No.03L16F20957<br>Eng.No.03LI5E20629 |
| 6. | C.Misc.No. 139/07<br>PF No.31/07 | Hero Honda Splendor<br>M/C<br>Black Colour | Reg. No.KA-05-EE-6312<br>Ch.No.00L20C30921<br>Eng.No.00L18M30858 |
| 7. | C.Misc No. 140/07<br>PF No.32/07 | Kavasaki Bajaj M/C<br>Black Colour | Reg.No. KL-11-1863<br>Ch.No.300087021<br>Eng. No.30E085818 |
| 8. | C.Misc. No. 141/07<br>PF No.33/07 | TVS-XL-50 M/C<br>Blue Colour | Reg.No.HYK-8556<br>Ch.No.011388-07 1981<br>Eng. No.01133-07-1981 |
| 9. | C.Misc.<br>142/07<br>PF No.34/07 | Suzuki Samurai M/C<br>Black Colour | Reg.No.KA-03-EL-4658<br>Ch.No.7102F849769<br>Eng.No.7102M902780 |
| 10. | C.Misc No.143/07<br>PF No.35/07 | Kavasaki Bajaj M/C<br>Black Colour | Reg.No.KA-03-7662<br>Ch.No.C107644<br>Eng.No.30CE032509 |
| 11. | C.Misc No.154/07<br>PF No.42/07 | Bajaj Chethak M/C<br>Green Colour | Reg.No. KA-02-J-9651<br>Ch.No.3D47929<br>Eng.No.06E93D47541 |
| 12. | C.Misc No.155/07<br>PF No.44/07 | Bajaj Chethak M/C<br>Green Colour | Reg. No.KA-03-Q-9474<br>Ch.No.06F95F41841<br>Eng.No.06T96E51482 |
| 13. | C.Misc.No. 156/07<br>PF No.44/07 | Kavasaki Bajaj M/C<br>Red Colour | Reg.No. KL-03-B-2217<br>Ch.No.31F95E-12949<br>Eng.No.31M95-E15799 |
| 14. | C.Misc.No.157/07<br>PF No.45/07 | Ind-Suzuki M/C<br>Red Colour | Reg.No.KA-03-E-1999<br>Ch.No.3511F02366<br>Eng.No.3511M033120 |
| 15. | C.Misc.No. 158/07<br>PF No.46/07 | Yamaha M/C Blue Colour | Reg.No. CKD-1992<br>Ch.No.ILI017527<br>Eng.No.ILI017527 |

Any person/s having right to claim the above vehicles shall approach the Mahadevapura Police Station with necessary documents within thirty days from the date of this publication, failing which the above vehicles will be confiscated to GOVERNMENT.

Any claims received after the due date will not be entertained.

Xth Addl. Chief Metropolitan Magistrate,
Mayo Hall Unit, Bangalore.

PR-377

ನಗರಾಭಿವೃದ್ಧಿ ಇಲಾಖೆ

ಅಧಿಸೂಚನೆ

ಸಂಖ್ಯೆ:ನಅಇ 779 ಅಪ್ರಾ 2008, ಬೆಂಗಳೂರು, ದಿನಾಂಕ:28ನೇ ಫೆಬ್ರವರಿ, 2008

ದಿನಾಂಕ:27.07.1993 ಸಂ.ನಅಇ 164 ಟಿಟಿಪಿ 93ರ ಅಧಿಸೂಚನೆಯಲ್ಲಿ ಘೋಷಿಸಲ್ಪಟ್ಟ ಹಾಲಿ ಬಳ್ಳಾರಿ–ಸಂಡೂರು ಸ್ಥಳೀಯ ಯೋಜನಾ ಪ್ರದೇಶವನ್ನು ಬಳ್ಳಾರಿ ತಾಲ್ಲೂಕು ಹಲಕುಂದಿ, ಮಿಂಚೇರಿ, ಸಂಜೀವರಾಯನಕೋಟೆ, ಬೇವಿನಹಳ್ಳಿ, ಕಕ್ಕಬೇವಿನಹಳ್ಳಿ ಗ್ರಾಮಗಳನ್ನೊಳಗೊಂಡಂತೆ ವಿಸ್ತರಿಸಲಾಗಿದೆ. ವಿಸ್ತರಿತ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳ ಯಾದಿಯನ್ನು ಮತ್ತು ವಿಸ್ತರಿತ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಣೆಯನ್ನು ಅನುಬಂಧ–I ಮತ್ತು ಅನುಬಂಧ–IIರಲ್ಲಿ ನಮೂದಿಸಿ ಪ್ರಕಟಿಸಲಾಗಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಸಿ.ಟಿ. ನಾರಾಯಣಸ್ವಾಮಿ

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**SCHEDULE-I**

**A) List of Villages included in the BELLARY-SANDUR LOCAL PLANNING AREA, Vide Notification No.Va.Na.E.164 TTP 93 dt:27.07.1993**

| Sl. No. | Name of the Village / Town / City | Extent included | Area in Hectare | Remarks |
|---|---|---|---|---|
| 1 | 2 | 3 | 4 | 5 |
| | **BELLARY TALUK** | | | |
| 1 | Thimmalapura | Entire Revenue Village | 1582.44 | |
| 2 | Kuditini | - do - | 7833.00 | |
| 3 | Veniveerapura | - do - | 2521.77 | |
| 4 | Haraginadoni | - do - | 2090.49 | |
| 5 | Janikunte | - do - | 1807.46 | |
| 6 | Belagal | - do - | 3712.57 | |
| 7 | Haladahalli | - do - | 518.03 | |
| 8 | Kolagallu | - do - | 5074.28 | |
| 9 | Honnahalli | - do - | 1382.96 | |
| 10 | Mundrigi | - do - | 906.38 | |
| 11 | Bellary Kasaba (Including Bellary) | - do - | 2691.07 | |
| 12 | Patrabudihal | - do - | 511.67 | |
| 13 | Andralu | - do - | 484.20 | |
| 14 | B.Gonal | - do - | 491.04 | |
| 15 | Bisilahalli | - do - | 589.74 | |
| 16 | Haddinagundu | - do - | 707.42 | |
| 17 | Sanganakal | - do - | 1031.36 | |
| | **Total** | | **33935.88 Hectare** | |

| Sl. No. | Name of the Village / Town / City | Extent included | Area in Hectare | Remarks |
|---|---|---|---|---|
| 1 | 2 | 3 | 4 | 5 |
| | **SANDUR TALUK** | | | |
| 1 | Basapur | Entire Revenue Village | 881.33 | |
| 2 | Kurekuppa | - do - | 2165.70 | |
| 3 | Daroji | - do - | 3973.66 | |

| 1 | 2 | 3 | 4 | 5 |
|---|---|---|---|---|
| 4 | Toranagal | - do - | 2505.47 | |
| 5 | Vaddu | - do - | 1300.71 | |
| 6 | Talur | - do - | 1361.01 | |
| 7 | Joga | - do - | 2337.04 | |
| 8 | Nagalapur | - do - | 454.13 | |
| 9 | Bannihatti | - do - | 765.72 | |
| 10 | Gangalapura | - do - | 289.77 | |
| 11 | Gouripura | -do- | 235.81 | |
| 11 | Taranagara | - do - | 983.67 | |
| 12 | Muraripura | - do - | 293.50 | |
| 13 | Sankarapura | - do - | 100.64 | |
| 14 | Dowlatpur | - do - | 890.95 | |
| 15 | Krishnanagar | - do - | 583.44 | |
| 16 | Sandur Kasaba | - do - | 739.04 | |
| 17 | Lakshmipura | - do - | 434.47 | |
| 18 | Dharmapura | - do - | 336.01 | |
| 19 | Hulikunte | - do - | 2202.63 | |
| 20 | Bhujanganagar (Hosahalli) | - do - | 625.94 | |
| 21 | Rangitpura | - do - | 209.69 | |
| 22 | Narasingpura | - do - | 137.60 | |
| 23 | Kodalu | - do - | 2138.03 | |
| 24 | Chikkantapura | - do - | 1437.37 | |
| 25 | Yarabanahalli | - do - | 1251.78 | |
| 26 | Musenayakanahalli | - do - | 305.95 | |
| | **Total** | | **28941.06 Hectare.** | |
| | **Total (A)** | **33278.88+27540.56** | **62876.94 Hectare.** | |

Existing LPA (A) =62876.94 Hectare
=628.76 Sq. Km

**B) List of Villages to be included in BELLARY-SANDUR LOCAL PLANNING AREA.**

| Sl. No. | Taluk | Name of the Villages | Area in Hectare | Remarks |
|---|---|---|---|---|
| 1 | Bellary | Bevinahalli | 506.19 | Entire Revenue Village |
| 2 | Bellary | Halakundi | 1938.72 | - do - |
| 3 | Bellary | Mincheri | 1135.22 | - do - |
| 4 | Bellary | Sanjeevarayanakote | 2802.80 | - do - |
| 5 | Bellary | Kakkabevinahalli | 434.49 | - do - |
| | | **Total (B)** | **6817.42** | |

Proposed area to be included in L.P.A(B) = 6817.42
Ha. =68.17 Sq.Km.

Proposed local planning area
(A+B) ⇒ 62876.94+6817.42 ⇒ 69694.36 Hectare
=696.943 Sq.Km

**DRAFT**

**Schedule-II**

**Running Boundary Description of Bellary-Sandur L.P.A.**

The boundary of the Bellary-Sandur L.P.A. starts at the point 'A' of the junction of village boundaries of Bellary and Sanganakallu at the Western corner of Sanganakallu village and runs along the Northern and Eastern boundaries of Sanganakallu village crossing Bellary-Alur Major District Road until it meets the junction of Sanganakallu and Bevinahalli village boundaries. It then continuous along the northern boundary of Bevinahalli village and Northern, Eastern and Southern boundaries of Kakkabevnahalli village crossing the Guntakal Railway Line and N.H.63 until it meets the Eastern boundary of Bevinahalli village , again it then runs along Eastern boundary of the Bevinahalli village and further along Bisalahal village boundaries at Eastern and Southern sides crossing Major District Road towards Rupanagudi. It then continuous along southern boundary of the B-Gonalu village, further continuous along the southern boundary of Andralu village and then continuous along the eastern and southern boundaries of Sanjeevarayanakote village passing through two Major District Roads towards Kalyanadurga. It further runs along the Southern boundaries of Mincheri and Halakundi villages passing through Bellary-Bangalore. National Highway No.63 and Major District Road towards Siddapura and further runs along Western boundary of Halakundi village until it touches the boundary of Honnahalli village. It then runs along southern boundaries of Honnahalli and Belagallu villages passing through Major District Road towards Tumati until it meets Janikunte village boundary. It then runs along Southern boundary of Janikunte village, then runs along the eastern, southern and western boundaries of Haraginadoni until it meets Kuduthini village boundary. It then runs along southern boundary of Kudutini and Musenayakanahalli village until it meets the junction of Yarabanahalli and Musenayakanahalli village boundaries. It further runs along Eastern boundary of Yarabanahalli and continuous along Eastern and Southern boundaries of Chikkanthapura village passing through Major District Road towards Metri. It then runs along Northern, Southern, Western boundaries of Kodalu Village meeting again the junction of Yarabanahalli and Chikkanthapur Village boundaries . It then continues along the Western boundaries of Yarabanahalli, Sultanpura and Musenayakanahalli Villages, until it meets Toranagallu village further runs along the southern boundary of Vaddu Village and further along Eastern boundaries of Talur and Bannihatti villages until it meets Taranagar Village boundary. It then runs along Eastern and Southern boundaries of Taranagar, Eastern and Southern boundaries of Shankarapura and further continuous along Eastern boundaries of Hosahalli and Narasingapura villages and then along Southern and Western boundaries of Ranajitpuar village crossing M.D.R. until it touches the junction of Narasingapura and Ranagitpura village boundaries at Southern side. It then runs along the Southern and Western boundaries of Narasingapura village, Southern boundaries of Hosahalli village, Eastern boundaries of Lakshimpura village. It then continuous along the Eastern boundary of Hulikunte village passing through Major District Road towards Devagiri and further continuous along the Southern boundaries of Hulikunte, Lashmipura and Dharmapuri village passing through State High Way towards Kudligi. It then runs along Western and Northern boundaries of Dharmapuri village until it meets Sandur village boundary. It then runs along Western boundary of Sandur and further runs along the Western and Northern boundaries of Dawlatpur village passing through State High Way towards Hospet and continuous further along the Northern boundary of Krishnagagr. It further runs along the Northern boundary of Hosahalli village, again Western and Northern boundaries of Shankarapur and runs further along Southern, Western and Northern boundaries of Muraripur village. It continuous further along the Western boundaries of Taranagar again, Gowripura and Gangalapur village. It continuous further along the Western boundary of Bannihatti village, Southern boundary of Hosahalli village and covers the Southern, Western and Northern boundaries of Joga village passing through Major District Road towards Hospet, until it meets Northern boundary of Hosahalli village. It further runs along the Northern boundary of Hosahalli village and continuous along Western boundary of Basapur and Kurekuppa village passing through Railway line and National High way towards Hospet. It then runs passing through State High Way towards Ganagavathi along the Northern boundaries of Daroji, Aralpuram and Madapuram villages until it touches the junction of boundaries of Madapuram and Thimmalapur villages. It continuous further along the Northern boundaries of

